# ಸುಬೋಧ ಬೀಜಗಣಿತ

## ಮೂರನೆಯ ಭಾಗ



ಲೇಖಕರು

**ಪ್ರಾಂ. ಶ್ರೀ. ಕಟ್ಟಿ,** ಎಮ್. ಎ. (ಕೇಂಬ್ರಿಜ್),

ಮಾಜೀ ಸೀನಿಅರ್ ಸ್ಕಾಲರ್, ಟ್ರಿನಿಟಿ ಕಾಲೇಜ, ಕೇಂಬ್ರಿಜ್,
ಗಣಿತ ವಿಷಯದ ಮಾಜೀ ಪ್ರಾಧ್ಯಾಪಕರು, ಎಲ್ಫಿನ್‌ಸ್ಟನ್ ಕಾಲೇಜ, ಮುಂಬಯಿ,
ಮತ್ತು ಮಾಜೀ ಪ್ರಧಾನ ಪ್ರಾಧ್ಯಾಪಕರು, ಸೆಕಂಡರಿ ಟ್ರೇನಿಂಗ ಕಾಲೇಜ, ಬೆಳಗಾಂವಿ.

ಮತ್ತು

**ವಾ. ಪ್ರಾಂ. ಖಾನೋಲಕರ,** ಎಮ್. ಎ. (ಲಂಡನ್),

ಶಿಕ್ಷಣ ಶಾಸ್ತ್ರದ ಮಾಜೀ ಪ್ರಾಧ್ಯಾಪಕರು, ಸೆಕಂಡರಿ ಟ್ರೇನಿಂಗ ಕಾಲೇಜ, ಬೆಳಗಾಂವಿ,
ಮತ್ತು ಶಿಕ್ಷಣ ಶಾಸ್ತ್ರದ ಪ್ರಾಧ್ಯಾಪಕರು, ಇಂಡಿಯನ್ ಇನ್‌ಸ್ಟಿಟ್ಯೂಟ ಆಫ್
ಎಜ್ಯುಕೇಶನ್, ಮುಂಬಯಿ.
ಮತ್ತು ಆ. ಗ. ಟೀಚರ್ಸ ಕಾಲೇಜ, ಅಹಮದಾಬಾದ.





ಓರಿಎಂಟ ಲಾಂಗಮನ್ಸ ಲಿಮಿಟೆಡ್

**ಮುಂಬಯಿ ಕಲಕತ್ತಾ ಮದ್ರಾಸ**

ಎಲ್ಲ ತರಹದ ಅನೇಕ ಉದಾಹರಣೆಗಳನ್ನು ಅಲ್ಲಲ್ಲಿ ಮಾದರಿಗಾಗಿ ಬಿಡಿಸಿ ತೋರಿಸಿದ್ದು ಪ್ರತಿಯೊಂದು ಪ್ರಶ್ನಸಂಗ್ರಹದಲ್ಲಿ ಸುಲಭ, ಮಧ್ಯಮ ತರಗತಿಯ ಮತ್ತು ಗಡುಚಾದ ಬೇರೆ ಉದಾಹರಣೆಗಳನ್ನು ಕೊಟ್ಟದ್ದರಿಂದ ವಿದ್ಯಾರ್ಥಿಗಳ ಶಕ್ತಿಗನುಸರಿಸಿ ಅವುಗಳಲ್ಲಿ ಆರಿಸಲು ಶಿಕ್ಷಕರಿಗೆ ಸಾಕಷ್ಟು ಆಸ್ಪದವಿದೆ.

ಪುಸ್ತಕವನ್ನು ವಿದ್ಯಾರ್ಥಿಗಳಿಗೆ ಆದಷ್ಟು ಉಪಯೋಗಪ್ರದವಾಗುವಂತೆ ಮಾಡಲು ಯತ್ನಿಸಿದೆ. ಪುಸ್ತಕದ ಉಪಯುಕ್ತತೆಯನ್ನು ಇನ್ನೂ ಹೆಚ್ಚಿಸುವ ಕೆಲಸದಲ್ಲಿ ಶಿಕ್ಷಕಮಿತ್ರರು ಕೆಲವು ವಿಧಾಯಕ ಸೂಚನೆಗಳನ್ನು ಮಾಡಿದರೆ ಅವುಗಳನ್ನು ಆದರದಿಂದ ಮತ್ತು ಆಭಾರಪೂರ್ವಕವಾಗಿ ಸ್ವೀಕರಿಸಲಾದೀತು. ಅದರಂತೆಯೇ ದೃಷ್ಟಿಪಥದೊಳಗಿಂದ ಜಾರಿದ ಮುದ್ರಣ ದೋಷಗಳನ್ನೂ ಮತ್ತು ಉತ್ತರಗಳೊಳಗಿನ ಉಳಿದು ಹೋದ ತಪ್ಪುಗಳನ್ನೂ ತೋರಿಸಿದರೆ ನಾವು ಬಹಳ ಆಭಾರಿಯಾಗುವೆವು. ಈ ವಿಷಯದಲ್ಲಿ ಪತ್ರವ್ಯವಹಾರವನ್ನು ವಾ. ಪಾಂ. ಖಾನೋಲಕರ ಇವರ ಹೆಸರಿನಲ್ಲಿ ಪ್ರಕಾಶಕರ ವಿಳಾಸಕ್ಕೆ ಕಳಿಸಬೇಕು.

# ಕೆಲವು ಪಾರಿಭಾಷಿಕ ಶಬ್ದಗಳು

ಅನುಕೂಲ ಗುಂಪುಗಳನ್ನು ಮಾಡುವದು= Suitable grouping.

ಅನುಪಾತ= Section

ಅಪೂರ್ಣಾಂಕಗಳ ವಿಗ್ರಹೀಕರಣ= Splitting up a fraction into partial fractions

ಅಕ್ಷ, ಸಮನಿರ್ದೇಶಕಾಕ್ಷ= Axis

ಆದೇಶ= Substitute

ಆದೇಶಿಸು, ಉತ್ಥಾಪಿಸು= To Substitute

ಆರಂಭಸ್ಥಾನ, ಪ್ರಸ್ಥಾನಬಿಂದು= Origin

ಏಕಕೋಟಿಕ= Of the first degree

ಕೋಟಿ, ಘಾತಪರಿಮಾಣ= Degree

ಕೋಟ್ಯಂತರ, ಕೋಟಿ= Ordinate

ಗುಣಕ ಸಿದ್ಧಾಂತ= Factor theorem

ಚಕ್ರೀಯ= Cyclic

ಚಕ್ರೀಯ ಕ್ರಮ= Cyclic order

ಚಕ್ರೀಯ ರಾಶಿ= Cyclic expression

ಚರ= Variable

ಛೇದ= Intercept

ಬಿಂದು= Point of intersection

ಟಿಕ= Of the third

ದ್ವಿಕೋಟಿಕ= Of the second

ಪರತಂತ್ರ, ಪರಾಧೀನ ಚರ= Dependent variable

ಪರಂಪರಿತ ಅಪೂರ್ಣಾಂಕ= Continued fraction

ಪಾದ= Quadrant

ಪ್ರತಿನಿಧಿ= Substiute

ಪ್ರಭಾಗ ಜಾತಿ (ಮಿಶ್ರ) ಅಪೂರ್ಣಾಂಕ= Complex fraction

ಫಲ= Function

ಬಿಂದು= Point

ಬಿಂದುವನ್ನು ಸ್ಥಾಪಿಸುವದು= To plot a point

ಭಾಗಾನುಬಂಧ ಪೂರ್ಣಾಂಕ= Mixed number

ಭುಜಾಂತರ, ಭುಜ= Abscissa

ಮಾನ, ಏಕಾಂಕ= Unit

ಯಥಾಕ್ರಮ ಏಕೀಕರಣ= Successive grouping

ರೂಪಾಂತರಾಲೇಖ= Conversion

ರೇಖಾಲೇಖ= Line graph

ವರ್ಗ ತ್ರಿಪದ= Quadratic trinomial

ವಿಭಾಜಕ= Factor

ವಿಭಾಜ್ಯ= Multiple

ಶೇಷಸಿದ್ಧಾಂತ= Remainder theorem

ಸಮಕೋಟಿ, ಸಮಘಾತ= Homogenous

ಸಮಕೋನ ತ್ರಿಕೋಣ= Equiangular triangle
ಸಮಚ್ಛೇದ= Common Denominator
ಸಮ ಪ್ರಮಾಣ, ಸಂಮಿತ= Symmetrical
ಸಮೀಕರಣದ ಪೂರ್ತತೆಯನ್ನು ಮಾಡುವದು= To Satisfy an equation
ಸಹನಿರ್ದೇಶಕ= Coordinate
ಸಂಗತ= Corresponding
ಸ್ತಂಭಾಲೇಖ= Column graph
ಸ್ಥಿರಪದ= Constnt term
ಸ್ವತಂತ್ರ (ಸ್ವಾಧೀನ) ಚರ= Independent variable
ಕ್ಷಿತಿಜಲಂಬ= Vertical
ಕ್ಷಿತಿಜ ಸಮಾಂತರ= Horizontal

ಪುಸ್ತಕವನ್ನು ಉಪಯೋಗಿಸುವ ಮೊದಲು ಕೆಳಗಿನ ತಿದ್ದುಪಡಿಯನ್ನು ಮಾಡಿಕೊಳ್ಳಬೇಕೆಂದು ಬಿನ್ನಹ.

| ಪುಟ | ಉದಾಹರಣೆ ಇಲ್ಲವೆ ಸಾಲು | | ತಪ್ಪು | ಒಪ್ಪು |
|---|---|---|---|---|
| | ಉ. | ೬ | ಬ = ೧ಮ = ೩ | ಬ = —೧,ಮ |
| ೨೩ | ಸಾ. | ೧೯ | ೬೦೦—೧೨ | ೬೦೦—೧೩ |
| ೨೪ | ಉ. | ೧೧ | ೨ರ೨ | ರ೨ |
| ೩೦ | ಉ. | ೧೨ | —(ಸ—೪ಮ)೩ | (೪ಸ—ಮ)೩ |
| | ಉ. | ೧೩ | (ಯ+ರ—ಸ)೩ | (ಯ—ರ—ಸ)೩ |
| ೩೮ | ಉ. | ೮ | ಪಮ | ಪ೨ಮ೨ |
| | ಉ. | ೧೮ | ಮ | ಮ೪ |
| ೪೧ | ಉ. | ೪ | ೯ | ೯೦ |
| ೬೫ | ಉ. | ೧೯ | +೬ | —೬ |
| ೭೫ | ಉ. | ೩ | ತ(ದ—ಸ೨) | ತ(ದ೨—ಸ೨) |
| ೮೭ | ಉ. | ೨ | ೨೦ | ೩೦ |
| | ಉ. | ೪ | ೧೯ಯ | ೫೮ಯ |
| ೧೨೩ | ಉ. | ೨೨ | ೩೨ಮ೨ | ಪ೨ಪ೨ |
| | ಉ. | ೨೩ | ೫೮÷೨ | ೫೮—೨ |
| ೧೨೭ | ಉ. | ೧೪ | $+೪ಯ^{೨}+೧$ | $-೪ಯ^{೩}+೧$ |
| ೧೪೨ | ಉ. | ೧೮ | $-\frac{೧}{ಮ೨}$ | $-\frac{೧}{ಮ}$ |

# ಅನುಕ್ರಮಣಿಕೆ

೩. $(ಪ+ಮ)^{೨} \equiv ಪ^{೨}+೨ಪಮ+ಮ^{೨}$

$\equiv ಪ^{೨}-೨ಪಮ+ಮ^{೨}+೪ಪಮ$

$\equiv (ಪ-ಮ)^{೨}+೪ಪಮ$

ಯಾವದೇ ಎರಡು ಪದಗಳ ಜೇರೀಜಿನ ವರ್ಗವು ಆ ಎರಡು ಪದಗಳೊಳಗಿನ ಅಂತರದ ವರ್ಗ ಅಧಿಕ ಆ ಪದಗಳ ಗುಣಾಕಾರದ ನಾಲ್ಕ್ಮಡಿ ಎಂದು ಬರೆಯಲು ಬರುವದು.

೪. $(ಪ-ಮ)^{೨} \equiv ಪ^{೨}-೨ಪಮ+ಮ^{೨}$

$\equiv ಪ^{೨}+೨ಪಮ+ಮ^{೨}-೪ಪಮ$

$\equiv (ಪ+ಮ)^{೨}-೪ಪಮ$

ಅಂದರೆಯೇ, ಎರಡು ಪದಗಳೊಳಗಿನ ಅಂತರದ ವರ್ಗ = ಆ ಪದಗಳ ಜೇರೀಜಿನ ವರ್ಗ ಉಣಾ ಅವುಗಳ ಗುಣಾಕಾರದ ನಾಲ್ಕ್ಮಡಿ.

೫. $(ಪ+ಮ)^{೨}+(ಪ-ಮ)^{೨} \equiv ಪ^{೨}+೨ಪಮ+ಮ^{೨}+ಪ^{೨}-೨ಪಮ+ಮ^{೨} \equiv ೨ಪ^{೨}+೨ಮ^{೨}$

$\therefore (ಪ^{೨}+ಮ^{೨}) \equiv \frac{೧}{೨}\{(ಪ+ಮ)^{೨}+(ಪ-ಮ)^{೨}\}$

ಯಾವದೇ ಎರಡು ಪದಗಳ ವರ್ಗಗಳ ಜೇರೀಜು ಆ ಎರಡು ಪದಗಳ ಜೇರೀಜಿನ ವರ್ಗ ಮತ್ತು ಅವುಗಳೊಳಗಿನ ಅಂತರದ ವರ್ಗ ಇವುಗಳ ಜೇರೀಜಿನ ಅರ್ಧದಷ್ಟು ಇರುತ್ತದೆ.

೬. $(ಪ+ಮ)^{೨}-(ಪ-ಮ)^{೨} \equiv (ಪ^{೨}+೨ಪಮ+ಮ^{೨})-(ಪ^{೨}-೨ಪಮ+ಮ^{೨})$

$\equiv ಪ^{೨}+೨ಪಮ+ಮ^{೨}-ಪ^{೨}+೨ಪಮ-ಮ^{೨}$

$\equiv ೪ಪಮ.$

$\therefore ಪಮ \equiv \frac{೧}{೪}\{(ಪ+ಮ)^{೨}-(ಪ-ಮ)^{೨}\}$

ಯಾವದೇ ಎರಡು ಪದಗಳ ಗುಣಾಕಾರವು ಆ ಎರಡು ಪದಗಳ ಜೇರೀಜಿನ ವರ್ಗ ಉಣಾ ಅವುಗಳೊಳಗಿನ ಅಂತರದ ವರ್ಗ ಇದರ ಒಂದು ನಾಲ್ಕಾಂಶಕ್ಕೆ ಸರಿ ಇರುತ್ತದೆ.

೧·೨. ಮೇಲಿನ **ನಿತ್ಯಸಮ**ಗಳೊಳಗಿನ ಕೆಲವನ್ನು ಮುಂದಿನ ಕೆಲವು ಉದಾಹರಣೆಗಳಲ್ಲಿ ಉಪಯೋಗಿಸಲಾಗಿದೆ.

**ಉ** ೧. $\text{ಪ} + \text{ಮ} = ೭$ ಮತ್ತು $\text{ಪಮ} = ೧೨$ ಇದ್ದರೆ $\text{ಪ}^{೨} + \text{ಮ}^{೨} = ?$

$$\text{ಪ}^{೨} + \text{ಮ}^{೨} = (\text{ಪ} + \text{ಮ})^{೨} - ೨\,\text{ಪಮ} \qquad (೧)$$
$$= (೭)^{೨} - ೨.\,೧೨$$
$$= ೪೯ - ೨೪$$
$$= \mathbf{೨೫}.$$

**ಉ. ೨.** $\text{ನ} - \text{ಮ} = ೪$, ಮತ್ತು $\text{ನಮ} = ೫$ ಇದ್ದರೆ $\text{ನ}^{೨} + \text{ಮ}^{೨} = ?$

$$\text{ನ}^{೨} + \text{ಮ}^{೨} = (\text{ನ} - \text{ಮ})^{೨} + ೨\,\text{ನಮ} \qquad (೨)$$
$$= ೪^{೨} + ೨.\,೫$$
$$= ೧೬ + ೧೦$$
$$= \mathbf{೨೬}.$$

**ಉ. ೩.** $\text{ಯ} - \frac{೧}{\text{ಯ}} = ೫$ ಇದ್ದರೆ $\text{ಯ}^{೨} + \frac{೧}{\text{ಯ}^{೨}} = ೨೭$ ಎಂಬುದನ್ನು ಸಿದ್ಧಮಾಡಿರಿ.

$$\text{ಯ}^{೨} + \frac{೧}{\text{ಯ}^{೨}} = \left(\text{ಯ} - \frac{೧}{\text{ಯ}}\right)^{೨} + ೨\cdot\text{ಯ}\cdot\frac{೧}{\text{ಯ}} \qquad (೨)$$
$$= (೫)^{೨} + ೨$$
$$= \mathbf{೨೭}.$$

**ಉ. ೪.** $\text{ನ} + \frac{೧}{\text{ನ}} = ೭$, ಇದ್ದರೆ $\text{ನ}^{೨} + \frac{೧}{\text{ನ}^{೨}} = ?$

$$\text{ನ}^{೨} + \frac{೧}{\text{ನ}^{೨}} = \left(\text{ನ} + \frac{೧}{\text{ನ}}\right)^{೨} - ೨\text{ನ}.\frac{೧}{\text{ನ}} \qquad (೧)$$
$$= (೭)^{೨} - ೨$$
$$= \mathbf{೪೭}.$$

**ಉ. ೫.** ಕ−ಗ=೩ ಮತ್ತು ಕಗ=೨೮ ಇದ್ದರೆ (ಕ+ಗ)$^2$ = ?

(ಕ+ಗ)$^2$ = (ಕ−ಗ)$^2$ + ೪ ಕಗ (೩)

= ೩$^2$ + ೪.೨೮

= ೯ + ೧೧೨

= ೧೨೧.

ಮೇಲಿನ ಉದಾಹರಣೆಗಳು ಕೆಳಗೆ ತೋರಿಸಿದಂತೆ ಸಹ ಬಿಡಿಸಲು ಬರುವವು.

**ಉ. ೧.** ಪ+ಮ=೭

ವರ್ಗ ಮಾಡಿ ಪ$^2$ + ೨ಪಮ + ಮ$^2$ = ೪೯

∴ ಪ$^2$ + ಮ$^2$ + ೨೪ = ೪೯ [∵ ಪಮ = ೧೨

ಪಕ್ಷಾಂತರದಿಂದ ಪ$^2$ + ಮ$^2$ = ೪೯ − ೨೪ = **೨೫.**

ಇದೇ ರೀತಿಯಿಂದ ವರ್ಗವನ್ನು ಮಾಡಿ ಮುಂದಿನ ನಾಲ್ಕು ಉದಾಹರಣೆಗಳನ್ನು ಬಿಡಿಸಲು ಬರುವದು.

**ಉ. ೬.** ಯ = ೫ ಮತ್ತು ರ = ೩ ಇದ್ದರೆ ೨೫ಯ$^2$ − ೭೦ಯರ + ೪೯ರ$^2$ = ?

೨೫ಯ$^2$ − ೭೦ಯರ + ೪೯ರ$^2$ = (೫ಯ)$^2$ − ೨.೫ಯ.೭ರ + (೭ರ)$^2$

= (೫ಯ − ೭ರ)$^2$

= (೫ × ೫ − ೭ × ೩)$^2$

= (೨೫ − ೨೧)$^2$

= (೪)$^2$

= ೧೬.

**ಉ. ೭.** (ಪ+ಬ−ಮ)$^2$ + ೨ (ಪ+ಬ−ಮ) (ಪ−ಬ+ಮ) + (ಪ−ಬ+ಮ)$^2$ ಇದಕ್ಕೆ ಸರಳರೂಪ ಕೊಡಿರಿ.

(ಪ+ಬ−ಮ) ದ ನಿರ್ದೇಶವನ್ನು **ಯ** ದಿಂದ ಮತ್ತು (ಪ−ಬ+ಮ) ದ **ರ** ದಿಂದ ಮಾಡಿದರೆ,

ರಾಶಿಯು = ಯ$^{೨}$ + ೨ ಯರ + ರ$^{೨}$ *

= (ಯ + ರ)$^{೨}$ *

= {(ಪ + ಬ − ಮ) + (ಪ − ಬ + ಮ)}$^{೨}$

= (೨ಪ)$^{೨}$

= ೪ಪ$^{೨}$.

ಉ. ೪. (ಕಪ − ಗಬ − ಘಮ)$^{೨}$ + (ಕಪ + ಗಬ − ಘಮ)$^{೨}$

− ೨ (ಕಪ − ಗಬ − ಘಮ)(ಕಪ + ಗಬ − ಘಮ)

ಇದಕ್ಕೆ ಸರಳರೂಪವನ್ನು ಕೊಡಿರಿ.

(ಕಪ − ಗಬ − ಘಮ) ದ ನಿರ್ದೇಶವನ್ನು ಯ ದಿಂದ ಮತ್ತು (ಕಪ + ಗಬ − ಘಮ) ದ ನಿರ್ದೇಶವನ್ನು ರ ದಿಂದ ಮಾಡಿದರೆ,

ರಾಶಿಯು = ಯ$^{೨}$ + ರ$^{೨}$ − ೨ಯರ *

= (ಯ − ರ)$^{೨}$ *

= {(ಕಪ − ಗಬ − ಘಮ) − (ಕಪ + ಗಬ − ಘಮ)}$^{೨}$

= (−೨ಗಬ)$^{೨}$

= ೪ಗ$^{೨}$ಬ$^{೨}$.

* ಯ, ರ, ಈ ಆದೇಶಗಳನ್ನು ತೆಗೆದುಕೊಳ್ಳದೇ ಈ ಹಂತಗಳನ್ನು ಬಿಡಬಹುದು.

## ಪ್ರಶ್ನೆಸಂಗ್ರಹ ೧.

ಕೆಳಗಿನ ರಾಶಿಗಳಿಗೆ ಸರಳರೂಪವನ್ನು ಕೊಡಿರಿ.

೧. (೩ತ + ಸ)$^{೨}$ − ೨(೩ತ + ಸ)(೩ತ − ಸ) + (೩ತ − ಸ)$^{೨}$.

೨. (೫ಯ − ೭ರ)$^{೨}$ + ೨(೫ಯ − ೭ರ)(೭ರ + ೩ಯ) + (೭ರ + ೩ಯ)$^{೨}$.

೩. (೫ಪ − ೪ಮ)$^{೨}$ + ೨(೫ಪ − ೪ಮ)(೪ಮ − ೩ಪ) + (೪ಮ − ೩ಪ)$^{೨}$.

೪. (೯ಕ + ೫ಗ)$^{೨}$ − ೨(೯ಕ + ೫ಗ)(೫ಗ + ೪ಘ) + (೫ಗ + ೪ಘ)$^{೨}$.

೫. (೨ಕ—೩ಗ+೫ಘ)$^{೨}$+೨(೨ಕ—೩ಗ+೫ಘ)
(೩ಗ—೫ಘ+೭ಕ) + (೩ಗ—೫ಘ+೭ಕ)$^{೨}$.

೬. ಪ=೨, ಬ=೧, ಮ=೩ ಇದ್ದರೆ ೪ಪ$^{೨}$ಬ$^{೨}$+೧೨ಪಬಮ+೯ಮ$^{೨}$=?

೭. ಅ=೧, ಕ= −೨, ಗ=೩ ಇದ್ದರೆ ೧೬ಅ$^{೨}$−೪೦ಅಕಗ+೨೫ಕ$^{೨}$ಗ$^{೨}$=?

೮. ಅ=೨, ಕ= −೩, ಗ=೪ ಇದ್ದರೆ (೨ಅ−ಕ+೨ಗ)$^{೨}$
−೨ (೨ಅ−ಕ+೨ಗ) (ಅ−೨ಕ−೨ಗ)+(ಅ−೨ಕ−೨ಗ)$^{೨}$=?

೯. ಅ+ಕ=೧೦, ಮತ್ತು ಅಕ= −೩ ಇದ್ದರೆ ಅ$^{೨}$+ಕ$^{೨}$=?

೧೦. ತ−ನ= −೩ ಮತ್ತು ತನ= −೪ ಇದ್ದರೆ ತ$^{೨}$+ನ$^{೨}$=?

೧೧. ಪ+ಮ= ೬ ಮತ್ತು ಪಮ= ೮ ಇದ್ದರೆ (ಪ—ಮ)$^{೨}$=?

೧೨. ಯ−ರ=೧೦ ಮತ್ತು ಯರ= −೧೬ ಇದ್ದರೆ (ಯ+ರ)$^{೨}$=?

ಸಿದ್ಧ ಮಾಡಿರಿ:

೧೩. ಅ+$\frac{೧}{ಅ}$= −೫ ಇದ್ದರೆ ಅ$^{೨}$+$\frac{೧}{ಅ^{೨}}$=೨೩.

೧೪. ಕ−$\frac{೧}{ಕ}$= −೪ ಇದ್ದರೆ ಕ$^{೨}$+$\frac{೧}{ಕ^{೨}}$=೧೮.

೧೫. ಯ+$\frac{೧}{ಯ}$=ಅ ಇದ್ದರೆ ಯ$^{೨}$+$\frac{೧}{ಯ^{೨}}$=ಅ$^{೨}$−೨.

೧೬. ಯ−$\frac{೧}{ಯ}$=ಕ ಇದ್ದರೆ ಯ$^{೨}$+$\frac{೧}{ಯ^{೨}}$=ಕ$^{೨}$+೨.

೧೭. ಬ+$\frac{೧}{ಬ}$= −೭ ಇದ್ದರೆ ಬ$^{೨}$+$\frac{೧}{ಬ^{೨}}$=?

೧೮. ಸ−$\frac{೧}{ಸ}$=೮ ಇದ್ದರೆ ಸ$^{೨}$+$\frac{೧}{ಸ^{೨}}$=?

೧೯. ಪ+$\frac{೧}{ಪ}$=೪ ಇದ್ದರೆ (ಪ−$\frac{೧}{ಪ}$)$^{೨}$=?

೨೦. ನ−$\frac{೧}{ನ}$= −೨ ಇದ್ದರೆ (ನ+$\frac{೧}{ನ}$)$^{೨}$=?

**ದ್ವಿಪದವರ್ಗವಿಸ್ತಾರದ ಮೂರು ಪದಗಳೊಳಗಿನ ಎರಡು ಪದಗಳನ್ನು ಕೊಟ್ಟಿದ್ದರೆ ಮೂರನೆಯದನ್ನು ಬರೆದು ವರ್ಗವನ್ನು ಪೂರ್ಣಗೊಳಿಸುವದು.**

೧·೩. ಈಗ ನಾವು ದ್ವಿಪದಿಯ ವರ್ಗದ ವಿಸ್ತಾರದೊಳಗಿನ ಮೂರೂ ಪದಗಳ ಒಂದಕ್ಕೊಂದು ಇರುವ ಸಂಬಂಧವು ಯಾವ ತರಹದ್ದಿರುತ್ತದೆಂಬುದನ್ನು ನೋಡುವಾ.

$$(\text{ಪ}+\text{ಮ})^2 = \text{ಪ}^2 + \text{೨ಪಮ} + \text{ಮ}^2 \quad \text{ಮತ್ತು}$$

$$(\text{ಪ}-\text{ಮ})^2 = \text{ಪ}^2 - \text{೨ಪಮ} + \text{ಮ}^2$$

ಇವುಗಳಲ್ಲಿ ವಿಸ್ತಾರದೊಳಗಿನ ನಡುವಿನ ಪದವು ಯಾವಾಗಲೂ ಮೊದಲನೆಯ ಪದದ ವರ್ಗಮೂಲ ಮತ್ತು ಕೊನೆಯ ಪದದ ವರ್ಗಮೂಲ ಇವುಗಳ ಗುಣಾಕಾರದ ಇಮ್ಮಡಿ ಇರುತ್ತದೆ. **ನಡುವಿನ ಪದ = ೨ × ಮೊದಲನೇ ಪದದ ವರ್ಗಮೂಲ × ಕೊನೆಯ ಪದದ ವರ್ಗಮೂಲ.** ಇದರ ಮೇಲಿಂದ ಮುಂದಿನ ಸಂಗತಿಯು ಸ್ಪಷ್ಟವಿರುವದು. ಎರಡು ವರ್ಗಗಳ ಜೋಡು ಕೊಟ್ಟಿದ್ದರೆ ಅವುಗಳ ವರ್ಗಮೂಲಗಳ ಗುಣಾಕಾರದ ಇಮ್ಮಡಿಯನ್ನು ಅದರಲ್ಲಿ ಕೂಡಿಸಿದರೆ ಇಲ್ಲವೆ ಕಳೆದರೆ ಮೂರೂ ಪದಗಳು ಕೂಡಿ ಒಂದು ವರ್ಗವನ್ನು ಪೂರ್ಣಗೊಳಿಸುತ್ತವೆ. **ಪ**$^2$ + **ಮ**$^2$ ದಲ್ಲಿ **ಪ**$^2$ ಮತ್ತು **ಮ**$^2$ ಇವುಗಳ ವರ್ಗಮೂಲಗಳ (**ಪ** ಮತ್ತು **ಮ** ಗಳ) ಗುಣಾಕಾರದ ಇಮ್ಮಡಿಯನ್ನು (**೨ಪಮ**) ಕೂಡಿಸಿದರೆ ಇಲ್ಲವೆ ಕಳೆದರೆ ಅದು ಒಂದು ಪೂರ್ಣ ವರ್ಗವಾಗುತ್ತದೆ. ಬದಿಯಲ್ಲಿಯ ಆಕೃತಿಯ ಮೇಲಿಂದ ಈ ಮಾತು ವಿಶೇಷ ಸ್ಪಷ್ಟವಾಗುವದು. ಮೊದಲನೆಯ ಆಕೃತಿಯಲ್ಲಿ **ಪ**$^2$ ಮತ್ತು **ಮ**$^2$ ಇವುಗಳಲ್ಲಿ **೨ಪಮ** ವನ್ನು ಕೂಡಿಸಿದರೆ ಪ+**ಮ** ದ ವರ್ಗ

ಆಕೃತಿ ೧

ಆಕೃತಿ ೨

ವಾಗುವವೆಂದು ಕಂಡುಬರುತ್ತದೆ. ಮತ್ತು ಎರಡನೆಯ ಆಕೃತಿಯಿಂದ **ಪ**$^{೨}$ + **ಮ**$^{೨}$ ದೊಳಗಿಂದ **೨ಪಮ** ವನ್ನು ಕಳೆದರೆಯುಳಿವ ವಸ್ತು **ಪ ಮ** ದ ವರ್ಗವಿರುವದೆಂದು ಕಂಡು ಬರುವದು. **ಕಖಗಘ** ಮತ್ತು **ತಗಚಜ** ಈ ಚೌರಸಗಳಿಂದ ಸಿದ್ಧವಾದ ಆಕೃತಿಯೊಳಗಿಂದ **ಕಖನದ** ಮತ್ತು **ಘನಚಜ** ಈ ಎರಡು ಸಮಾನ ಕಾಟಕೋನ ಚೌಕೋನಗಳಿಂದ ಸಿದ್ಧವಾದ ಆಕೃತಿಗಳನ್ನು ತೆಗೆದುಹಾಕಿದರೆ **ದಘತಘ** ಈ ಚೌರಸವು ಉಳಿಯುವದು.

ಮೇಲಿನ ವಿವೇಚನೆಯ ಮೇಲಿಂದ ಮುಂದಿನ ಸಂಗತಿಯು ಸ್ಪಷ್ಟ ಇರುವದು. ಎರಡು ಪದಗಳ ಬೇರೀಜಿನಲ್ಲಿ ಆ ಎರಡು ಪದಗಳ ವರ್ಗಮೂಲಗಳ ಗುಣಾಕಾರದ ಇಮ್ಮಡಿಯನ್ನು ಕೂಡಿಸಿದರೆ ಆ ಮೂರೂ ಪದಗಳು ಕೂಡಿ ಒಂದು ಪೂರ್ಣ ವರ್ಗವಾಗುತ್ತದೆ, ಮತ್ತು ಅದರಂತೆಯೇ ಎರಡು ಪದಗಳ ಬೇರೀಜಿನೊಳಗಿಂದ ಆ ಪದಗಳ ವರ್ಗಮೂಲಗಳ ಗುಣಾಕಾರದ ಇಮ್ಮಡಿಯನ್ನು ಕಳೆದರೆ ಆ ಮೂರೂ ಪದಗಳು ಕೂಡಿ ಒಂದು ಪೂರ್ಣ ವರ್ಗವಾಗುತ್ತದೆ. ಉದಾಹರಣೆಗಾಗಿ, ೧೦೦ಅ$^{೨}$ + ೧೨೧ಕ$^{೨}$ ಇದರಲ್ಲಿ ಪದಗಳ ವರ್ಗಮೂಲಗಳು ೧೦ಅ ಮತ್ತು ೧೧ಕ ಇವುಗಳ ಗುಣಾಕಾರದ ಇಮ್ಮಡಿ ೨೨೦ಅಕ ಕೂಡಿಸಿದರೆ ಇಲ್ಲವೆ ಕಳೆದರೆ ಬರುವ ರಾಶಿಗಳು ೧೦೦ಅ$^{೨}$+೨೨೦ಅಕ+೧೨೧ಕ$^{೨}$ ಮತ್ತು ೧೦೦ಅ$^{೨}$—೨೨೦ಅಕ+೧೨೧ಕ$^{೨}$ ಇವು ಪೂರ್ಣ ವರ್ಗಗಳಿರುವವು.

ಮೊದಲನೆಯದು ೧೦ಅ+೧೧ಕ ದ ವರ್ಗವಿದ್ದು ಎರಡನೆಯದು ೧೦ಅ—೧೧ಕ ದ್ದು ವರ್ಗವಿರುತ್ತದೆ.

೧೦೦ಅ$^{೨}$ .... + ೧೨೧ಕ$^{೨}$
= (೧೦ಅ)$^{೨}$ .... + (೧೧ಕ)$^{೨}$
= (೧೦ಅ)$^{೨}$ ±
೨. ೧೦ಅ. ೧೧ಕ. + (೧೧ಕ)$^{೨}$
= (೧೦ಅ ± ೧೧ಕ)$^{೨}$

**೧·೪.** ಅದರಂತೆಯೇ ನಡುವಿನ ಪದವು= ೨× ಮೊದಲನೇ ಪದದ ವರ್ಗಮೂಲ× ಕೊನೆಯ ಪದದ ವರ್ಗಮೂಲ ಇರುವದರಿಂದ ಮೊದಲನೆಯ ಪದದ ವರ್ಗಮೂಲ× ಕೊನೆಯ ಪದದ ವರ್ಗಮೂಲ=ನಡುವಿನ ಪದದ ಅರ್ಧ.

∴ ಕೊನೆಯ ಪದದ ವರ್ಗಮೂಲವು = ನಡುವಿನ ಪದದ ಅರ್ಧ ÷ ಮೊದಲನೇ ಪದದ ವರ್ಗಮೂಲ.

ಇದರಲ್ಲಿ ನಡುವಿನ ಪದದ ಅರ್ಧ ೪೨ಅಕ, ಇದಕ್ಕೆ ಕೊನೆಯ ಪದದ ವರ್ಗಮೂಲ ೭ಕ ದಿಂದ ಭಾಗಿಸಿ ಬರುವ ಭಾಗಾಕಾರ ೬ಅ, ಇದರ ವರ್ಗ ೩೬ಅ$^{೨}$ ಇದು ಮೊದಲನೇ ಪದವಿದ್ದು ವಿಸ್ತಾರವು ೩೬ಅ$^{೨}$+೮೪ಅಕ+೪೯ಕ$^{೨}$ ಇದೆ ಎಂದು ಹೇಳಲು ಬರುವದು. ಮತ್ತು....

–೧೪೪ ಅಕ+೮೧ಕ$^{೨}$ ಇದರಲ್ಲಿ ನಡುವಿನ ಪದದ ಅರ್ಧ ೭೨ಅಕ, ಇದಕ್ಕೆ ಕೊನೆಯ ಪದದ ವರ್ಗಮೂಲ ೯ಕ ಇದರಿಂದ ಭಾಗಿಸಿ ಬರುವ ಭಾಗಾಕಾರ ೮ಅ, ಇದರ ವರ್ಗ ೬೪ಅ$^{೨}$ ಇದು ಮೊದಲನೇಯ ಪದವು ಇದ್ದು ವಿಸ್ತಾರವು ೬೪ಅ$^{೨}$–೧೪೪ಅಕ+೮೧ಕ$^{೨}$ ಇದೆ ಎಂದು ಹೇಳಲು ಬರುವದು.

ಇಷ್ಟು ಸ್ಪಷ್ಟಮಾಡಿದ ಮೇಲೆ ಇನ್ನು ನಮಗೆ ಮುಂದಿನ ಪ್ರಶ್ನೆಸಂಗ್ರಹದೊಳಗಿನ ಉದಾಹರಣೆಗಳನು ಬಿಡಿಸಲು ಬರಬೇಕು.

... ೮೪ಅಕ+೪೯ಕ$^{೨}$
= ...+೨·೬ಅ.೭ಕ+(೭ಕ)$^{೨}$
=(೬ಅ)$^{೨}$+೨.೬ಅ.೭ಕ+(೭ಕ)$^{೨}$
=(೬ಅ+೭ಕ)$^{೨}$

... —೧೪೪ಅಕ+೮೧ಕ$^{೨}$
=...–೨·೮ಅ.೯ಕ+(೯ಕ)$^{೨}$
= (೮ಅ)$^{೨}$· ೨·೮ಅ·೯ಕ+(೯ಕ)$^{೨}$
= (೮ಅ—೯ಕ)$^{೨}$

**ಉ. ೧.** ೩೬ ಯ$^{೨}$—೬೦ಯರ ಇದರಲ್ಲಿ ಏನು ಕೂಡಿಸಿದರೆ ಸಿದ್ಧವಾಗುವ ರಾಶಿಯು ಪೂರ್ಣ ವರ್ಗವಾಗುವದು ?

೩೬ ಯ$^{೨}$ = (೬ಯ)$^{೨}$, ಮತ್ತು ೬೦ಯರ = ೨.೬ಯ.೫ರ.

∴ (೫ರ)$^{೨}$, ಅಂ. ೨೫ರ$^{೨}$ ಕೂಡಿಸಿದರೆ ರಾಶಿಯು ಪೂರ್ಣ ವರ್ಗವಾಗುವದು.

೩೬ಯ$^{೨}$—೬೦ಯರ+೨೫ರ$^{೨}$ ಇದು ೬ಯ—೫ರ ದ ವರ್ಗವಿರುತ್ತದೆ.

**ಉ. ೨.** ೪ಯ$^{೨}$+೪೯ವ$^{೨}$ ಇದರಲ್ಲಿ ಏನು ಕೂಡಿಸಿದರೆ ಬೇರೀಜು ಪೂರ್ಣ ವರ್ಗವಾಗುವದು ?

೪ಯ$^{೨}$=(೨ಯ)$^{೨}$, ಮತ್ತು ೪೯ವ$^{೨}$ = (೭ವ)$^{೨}$

∴ ೨·೨ಯ·೭ವ, ಅಂ· ೨೮ಯವ ಕೂಡಿಸಿದರೆ ರಾಶಿಯು ಪೂರ್ಣ ವರ್ಗ-ವಾಗುವದು ?

೪ಯ$^{೨}$+೨೮ಯವ+೪೯ವ$^{೨}$ ಇದು ೨ಯ+೭ವ ದ ವರ್ಗವಿರುತ್ತದೆ.

**ಉ. ೩.** ೧೨೧ನ² + ೬೪ಮ² ಇದರೊಳಗಿಂದ ಏನು ಕಳೆದರೆ ಶೇಷವು ಪೂರ್ಣ ವರ್ಗವಾಗುವದು? ೧೨೧ನ² = (೧೧ನ)² ಮತ್ತು ೬೪ಮ² = (೮ಮ)².
∴ ೨·೧೧ನ·೮ಮ, ಅಂ. ೧೭೬ನಮ ಕಳೆದರೆ ಶೇಷವು ಪೂರ್ಣವರ್ಗವಾಗುವುದು.
೧೨೧ನ² − ೧೭೬ನಮ + ೬೪ಮ² ಇದು ೧೧ನ − ೮ಮ ದ ವರ್ಗವಿರುವದು.

**ಉ. ೪.** ೪೯ಯ² + ೫೬ಯ ಇದರಲ್ಲಿ ಏನು ಕೂಡಿಸಿದರೆ ಬೇರೀಜು ಪೂರ್ಣವರ್ಗವಾಗುವದು.

೪೯ಯ² = (೭ಯ)², ಮತ್ತು ೫೬ಯ = ೨.೭ಯ.೪.
∴ (೪)², ಅಂ. ೧೬ ಕೂಡಿಸಿದರೆ ಬೇರೀಜು ಪೂರ್ಣವರ್ಗವಾಗುವದು.
೪೯ಯ² + ೫೬ಯ + ೧೬ ಇದು ೭ಯ + ೪ ದ ವರ್ಗವಿರುತ್ತದೆ.

**ಉ. ೫.** ೨೫ಯ² ೬೦ಕಯ + ೨೭ಕ² ಈ ರಾಶಿಯಲ್ಲಿ ಎಷ್ಟು ಕ² ಗಳನ್ನು ಕೂಡಿಸಿದರೆ ಸಿದ್ಧವಾಗುವ ರಾಶಿಯು ಪೂರ್ಣ ವರ್ಗವಿರುವದು?
೨೫ಯ² = (೫ಯ)², ಮತ್ತು ೬೦ಕಯ = ೨.೬ಕ.೫ಯ.
∴ ೨೫ಯ² − ೬೦ಕಯ ದ ಜೊತೆಗೆ (೬ಕ)², ಅಂ, ೩೬ಕ² ಇದ್ದರೆ ಅದು ಪೂರ್ಣ ವರ್ಗವಾಗುವದು. ಆದುದರಿಂದ ಮೂಲರಾಶಿಯಲ್ಲಿ ೯ಕ² ಕೂಡಿಸಿದರೆ ಸಿದ್ಧವಾಗುವ ರಾಶಿಯು ಪೂರ್ಣವರ್ಗವಿರುವದು.
೨೫ಯ² — ೬೦ಕಯ + ೩೬ಕ² ಇದು ೫ಯ − ೬ಕ ದ ವರ್ಗವಿರುವದು.

## ಪ್ರಶ್ನೆಸಂಗ್ರಹ ೨.

[ಇದರಲ್ಲಿಯು ಎಲ್ಲ ಉದಾಹರಣೆಗಳು ಬಾಯಿಯಿಂದ ಬಿಡಿಸಲು ಬರುವವು.]

ಮುಂದೆ ಕೊಟ್ಟ ರಾಶಿಗಳಲ್ಲಿ ಪ್ರತಿಯೊಂದು ರಾಶಿಗೆ ಏನು ಕೂಡಿಸಿದರೆ ಸಿದ್ಧವಾಗುವ ರಾಶಿಯು ಯಾವದಾದರೊಂದು ದ್ವಿಪದಿಯ ವರ್ಗವಾಗುವದ ಇದನ್ನು ಹೇಳಿ ಅದು ಯಾವ ದ್ವಿಪದಿಯ ವರ್ಗವಿರುವದೆಂಬುದನ್ನು ಹೇಳಿರಿ :

೧. ೧೦೦ರ² + ೬೦ರ.
೨. ೧೪೪ಸ² − ೧೬೮ಸ.
೩. ೧೬೯ವ² — ೧೦೪ವ.
೪. ೧೯೬ತ² − ೮೪ತ.
೫. ೪ಕ್ಷ² + ೨೦ಕ್ಷ + ೨೧.
೬. ೯ಕ್ಷ² − ೧೨ಕ್ಷ − ೫.

ಕೆಳಗೆ ತೋರಿಸಿದಂತೆ ದ್ವಿಪದವರ್ಗವಿಸ್ತಾರಸೂತ್ರದ ಸಹಾಯದಿಂದ **ಯಾವದೇ ತ್ರಿಪದಿಯ ವರ್ಗವು ಅದರಲ್ಲಿಯ ಮೂರೂ ಪದಗಳ ವರ್ಗಗಳ ಬೇರೀಜು ಅಧಿಕ ಆ ಪದಗಳೊಳಗಿನ ಎರಡೆರಡರ ಗುಣಾಕಾರಗಳ ಇಮ್ಮಡಿಯಷ್ಟು** ಇರುತ್ತದೆಂದು ಅಲ್ಲಿ ತೋರಿಸಿದೆ.

**ಪ+ಬ** ದ ನಿರ್ದೇಶವನ್ನು ಅ ದಿಂದ ಮಾಡಿದರೆ,

$(ಪ+ಬ+ಮ)^೨ = (ಅ+ಮ)^೨$

$= ಅ^೨ + ೨ಅಮ + ಮ^೨$

$= (ಪ+ಬ)^೨ + ೨ಮ(ಪ+ಬ) + ಮ^೨$

[ ಅ ದ ಬದಲಾಗಿ ಮೂಲ ಪ+ಬ ಬರೆದು ]

$= ಪ^೨ + ೨ಪಬ + ಬ^೨ + ೨ಪಮ + ೨ಬಮ + ಮ^೨$

$= ಪ^೨ + ಬ^೨ + ಮ^೨ + ೨ಪಬ + ೨ಬಮ + ೨ಮಪ$

ಬದಿಯಲ್ಲಿಯ ಆಕೃತಿ ಮೇಲಿಂದಲೂ ಈ ಸಂಗತಿಯು ಸ್ಪಷ್ಟವಾಗುವದು. ಈ ವಿಸ್ತಾರ-ಸೂತ್ರದ ಉಪಯೋಗವನ್ನು ಮಾಡಿ ಹಿಂದೆ ಕೆಲವು ಉದಾಹರಣೆಗಳನ್ನು ಬಿಡಿಸಿದೆ. ಇಂದು ನಾವು ಅವುಗಳ ಉಜಳಣೆ-ಯನ್ನು ಮಾಡಿ ತರುವಾಯ ಈ ಸೂತ್ರದ ಉಪಯೋಗವನ್ನು ಇನ್ನೂ ಹೆಚ್ಚು ಹೇಗೆ ಮಾಡಲು ಬರುತ್ತದೆಂಬುದನ್ನು ನೋಡುವಾ.

| ಪ | ಬ | ಮ | |
|---|---|---|---|
| $ಪ^೨$ | ಪಬ | ಪಮ | ಪ |
| ಪಬ | $ಬ^೨$ | ಬಮ | |
| ಪಮ | ಬಮ | $ಮ^೨$ | ಮ |

ಆಕೃತಿ ೩.

**ಉ. ೧.** $(ಪ-ಬ-ಮ)^೨ = ಪ^೨ + (-ಬ)^೨ + (-ಮ)^೨ + ೨ಪ(-ಬ) + ೨ಪ(-ಮ) + ೨(-ಬ)(-ಮ)$
$= ಪ^೨ + ಬ^೨ + ಮ^೨ - ೨ಪಬ + ೨ಬಮ - ೨ಮಪ.$

**ಉ. ೨.** $(೫ಕ-೨ಗ+೬ಘ)^೨ = (೫ಕ)^೨ + (-೨ಗ)^೨ + (೬ಘ)^೨ + ೨.೫ಕ(-೨ಗ) + ೨.೫ಕ.೬ಘ +$

೨(—೨ಗ).೬ಘ

=೨೫ಕ$^{೨}$ + ೪ಗ$^{೨}$ + ೩೬ಘ$^{೨}$ − ೨೦ಕಗ + ೬೦ಕಘ − ೨೪ಗಘ.

ಉ. ೩. (೮ಪ − $\frac{೧}{೨}$ಬ − $\frac{೩}{೪}$ಮ)$^{೨}$

= (೮ಪ)$^{೨}$ + (− $\frac{೧}{೨}$ಬ)$^{೨}$ + (− $\frac{೩}{೪}$ಮ)$^{೨}$ + ೨·೮ಪ

(− $\frac{೧}{೨}$ಬ) + ೨·೮ಪ(— $\frac{೩}{೪}$ಮ) + ೨ (— $\frac{೧}{೨}$ಬ) (— $\frac{೩}{೪}$ಮ)

= ೬೪ಪ$^{೨}$ + $\frac{೧}{೪}$ಬ$^{೨}$ + $\frac{೯}{೧೬}$ಮ$^{೨}$ − ೮ಪಬ − ೧೨ಪಮ + $\frac{೩}{೪}$ಬಮ

ಉ. ೪. (೩ಯ$^{೩}$ + ರ$^{೨}$ — ೫ಲ)$^{೨}$ = (೩ಯ$^{೩}$)$^{೨}$ + (ರ$^{೨}$)$^{೨}$ +

(− ೫ಲ)$^{೨}$ + ೨·೩ಯ$^{೩}$. ರ$^{೨}$ + ೨·೩ಯ$^{೩}$ (—೫ಲ) +

೨ರ$^{೨}$(—೫ಲ)

= ೪ಯ$^{೬}$ + ರ$^{೪}$ + ೨೫ಲ$^{೨}$ + ೪ಯ$^{೩}$ರ$^{೨}$—

೩೦ಯ$^{೩}$ಲ—೧೦ರ$^{೨}$ಲ.

ಸ್ವಲ್ಪ ರೂಢಿಯಾದ ಮೇಲೆ ಯಾವದೇ ತ್ರಿಪದಿಯು ವರ್ಗದ ವಿಸ್ತಾರವನ್ನು ನಡುವಿನ ಹಂತವನ್ನು ಬಿಟ್ಟು ನಮಗೆ ಒಮ್ಮೆಲೇ ಬರೆಯಲು ಬರುವದು.

ಉ. ೫. ಯ=೩, ರ=೨, ಲ=೫ ಇದ್ದರೆ ೯ಯ$^{೨}$ + ೪೯ರ$^{೨}$ + ೪ಲ$^{೨}$

− ೪೨ಯರ − ೨೮ರಲ + ೧೨ಲಯ = ?

೯ಯ$^{೨}$ + ೪೯ರ$^{೨}$ + ೪ಲ$^{೪}$ − ೪೨ಯರ − ೨೦ರಲ + ೧೨ಲಯ

=(೩ಯ)$^{೨}$ + (—೭ರ)$^{೨}$ + (೨ಲ)$^{೨}$ + ೨·೩ಯ (—೭ರ)

+ ೨·೨ಲ (—೭ರ) + ೨·೨ಲ·೩ಯ

=(೩ಯ—೭ರ + ೨ಲ)$^{೨}$

= (೯—೧೪ + ೧೦)$^{೨}$

= (೫)$^{೨}$

= ೨೫.

ಉ. ೬. $(ಅ+ಬ)^೪$ ರ ವಿಸ್ತಾರವನ್ನು ಮಾಡಿರಿ

$$(ಅ+ಬ)^೪ = \{(ಅ+ಬ)^೨\}^೨$$
$$= (ಅ^೨+೨ಅಬ+ಬ^೨)^೨$$
$$= (ಅ^೨)^೨ + (೨ಅಬ)^೨ + (ಬ^೨)^೨ + ೨ಅ^೨\cdot ೨ಅಬ + ೨ಅ^೨ಬ^೨ + ೨\cdot ೨ಅಬ\cdot ಬ^೨$$
$$= ಅ^೪ + ೪ಅ^೨ಬ^೨ + ಬ^೪ + ೪ಅ^೩ಬ + ೨ಅ^೨ಬ^೨ + ೪ಅಬ^೩$$
$$= ಅ^೪ + ೪ಅ^೩ಬ + ೬ಅ^೨ಬ^೨ + ೪ಅಬ^೩ + ಬ^೪.$$

## ಪ್ರಶ್ನೆಸಂಗ್ರಹ ೩.

(ಮೊದಲಿನ ಬಗೆಗಳಷ್ಟು ಉದಾಹರಣೆಗಳನ್ನು ಬಾಯಿಯಿಂದ ಬಿಡಿಸಲು ಬರುವವು.)

ಕೆಳಗಿನ ರಾಶಿಗಳ ವರ್ಗಗಳ ವಿಸ್ತಾರಗಳನ್ನು ಹೇಳಿರಿ.

೧. $೬ತ-ದ-೩$.

೨. $ಯ-೪ರ+೩ಲ$.

೩. $೮ಯ+೩ರ+೨ಲ$.

೪. $೫ಕ-೨ಗ+೫ಫ$.

೫. $೪ಅ-೨ಬ-೫$.

೬. $೨ಯ-೩ರ+೭ಲ$.

೭. $೪ಕ+೭ಗ-೬ಫ$.

೮. $೯ತ-೧೦ದ-೭ನ$.

೯. $೫ಕ^೨-೩ಗ-ಫ^೨$.

೧೦. $ಕ^೨-೨ಕಗ+೩ಗ^೨$.

೧೧. $ಯ^೪-೨ಯ^೨-೫ಯ$.

೧೨. $೭ಯ^೨-೬ಯರ+೭ರ^೨$.

೧೩. $೫ತ^೨-೬ತ-೭$.

೧೪. $೩ಅ-೫-\frac{೧}{೩ಅ}$.

೧೫. $\frac{೨}{ಕ}-\frac{೩}{ಗ}-\frac{೫}{ಫ}$.

೧೬. $\frac{೫}{ಯರ}-\frac{೨}{ರಲ}+\frac{೭}{ಲಯ}$.

೧೭. $\frac{ತ}{ದ}+\frac{ದ}{ನ}-\frac{ನ}{ತ}$.

೧೮. $\frac{೪ತ}{೫ದ}-\frac{೧೦ದ}{೩ನ}-\frac{೯ನ}{೨ತ}$.

ಕೆಳಗಿನ ರಾಶಿಗಳು ಯಾವ ರಾಶಿಗಳ ವರ್ಗಗಳಿವೆ ಎಂಬುದನ್ನು ಹೇಳಿರಿ

೧೯. $೯ಅ^೨+೪ಬ^೨+೪೯ಮ^೨-೧೨ಅಬ-೨೮ಬಮ+೪೨ಅಮ$.

೨೦. $೪ಕ^೪+೧೬ಕ^೩+೪ಕ^೨-೨೪ಕ+೯$.

೨೧. $೧೬ಯ^೪-೨೪ಯ^೩ರ+೪೯ಯ^೨ರ^೨-೩೦ಯರ^೩+೨೫ರ^೪$.

ತೆರವಿದ್ದ ಸ್ಥಳಗಳನ್ನು ತುಂಬಿರಿ.

೩೧. (೩ಯ .... + ೫ಲ)$^{೨}$ = .... .... .... —೧೨ಯರ .... ....

೩೨. ( .... —೭ರ....)$^{೨}$ = .... .... .... —೪೨ಯರ .... — ೬೮ಯ.

೩೩. (೫ಪ .... .... )$^{೨}$ = .... .... .... .... +೧೨ಬಮ ೨೦ಮಪ.

೩೪. ( .... —೪ಗ.... )$^{೨}$ = .... —೨೪ಕಗ .... + ೫೪ಕ .... ....

೩೫. ಯ=೫, ರ=೩, ಲ=—೧ ಇದ್ದರೆ ಯ$^{೨}$ + ೪ರ$^{೨}$ + ಲ$^{೨}$ —೪ಯರ —೪ರಲ + ೨ಲಯ = ?

೩೬. ಪ=೩, ಬ=$\frac{೨}{೩}$, ಮ=೧$\frac{೧}{೩}$ ಇದ್ದರೆ ೪ಪ$^{೨}$ + ೮೧ಬ$^{೨}$ + ೧೬ಮ$^{೨}$ —೩೬ಪಬ + ೭೨ಬಮ —೧೬ಮಪ = ?

೩೭. ತ=$\frac{೧}{೩}$ ಇದ್ದರೆ ತ$^{೨}$—೪ತ + ೬ —$\frac{೪}{ತ}$ + $\frac{೧}{ತ^{೨}}$ = ?

ಕೆಳಗಿನ ವಿಸ್ತಾರಗಳನ್ನು ಬರೆಯಿರಿ.

೩೮. (ತ—೩ ವ)$^{೪}$, ೩೯. (೫ಸ + ೨ ಮ)$^{೪}$.

೪೦. (ಯ — $\frac{೧}{ಯ}$)$^{೪}$.

೧·೬. ∵ (ಪ + ಬ + ಮ)$^{೨}$

≡ ಪ$^{೨}$ + ಬ$^{೨}$ + ಮ$^{೨}$ + ೨ಪಬ + ೨ಬಮ + ೨ಮಪ

≡ ಪ$^{೨}$ + ಬ$^{೨}$ + ಮ$^{೨}$ + ೨ (ಪಬ + ಬಮ + ಮಪ)

∴ **ಪ$^{೨}$ + ಬ$^{೨}$ + ಮ$^{೨}$ ≡ (ಪ + ಬ + ಮ)$^{೨}$**

**— ೨(ಪಬ + ಬಮ + ಮಪ)** ಮತ್ತು ೨(ಪಬ + ಬಮ + ಮಪ)

≡ (ಪ + ಬ + ಮ)$^{೨}$ — (ಪ$^{೨}$ + ಬ$^{೨}$ + ಮ$^{೨}$)$^{೨}$ ಆಗುವದರಿಂದ

**ಪಬ + ಬಮ + ಮಪ**

**≡ $\frac{೧}{೨}${(ಪ + ಬ + ಮ)$^{೨}$ — (ಪ$^{೨}$ + ಬ$^{೨}$ + ಮ$^{೨}$)}**

ಮೇಲಿನ ನಿತ್ಯಸಮಗಳ ಉಪಯೋಗವನ್ನು ಮಾಡಿ ಮುಂದೆ ಕೆಲವು ಉದಾಹರಣೆಗಳನ್ನು ಹೇಗೆ ಬಿಡಿಸಿದೆ ಎಂಬುದನ್ನು ನೋಡಿರಿ.

ಉ. ೧. $\text{ಯ}+\text{ರ}+\text{ಲ}=\text{೫}$, ಮತ್ತು $\text{ಯರ}+\text{ರಲ}+\text{ಲಯ}=\text{೮}$ ಇದ್ದರೆ $\text{ಯ}^{\text{೨}}+\text{ರ}^{\text{೨}}+\text{ಲ}^{\text{೨}}=?$

$$\text{ಯ}^{\text{೨}}+\text{ರ}^{\text{೨}}+\text{ಲ}^{\text{೨}}=(\text{ಯ}+\text{ರ}+\text{ಲ})^{\text{೨}}-\text{೨}(\text{ಯರ}+\text{ರಲ}+\text{ಲಯ})$$
$$=(\text{೫})^{\text{೨}}-\text{೨}\cdot\text{೮}$$
$$=\text{೨೫}-\text{೧೬}$$
$$=\text{೯}.$$

ಉ. ೨. $\text{ಕ}+\text{ಗ}+\text{ಘ}=\text{೬}$ ಮತ್ತು $\text{ಕ}^{\text{೨}}+\text{ಗ}^{\text{೨}}+\text{ಘ}^{\text{೨}}=\text{೩೮}$ ಇದ್ದರೆ $\text{ಕಗ}+\text{ಗಘ}+\text{ಘಕ}=?$

$$\text{ಕಗ}+\text{ಗಘ}+\text{ಘಕ}$$
$$=\tfrac{\text{೧}}{\text{೨}}\{(\text{ಕ}+\text{ಗ}+\text{ಘ})^{\text{೨}}-(\text{ಕ}^{\text{೨}}+\text{ಗ}^{\text{೨}}+\text{ಘ}^{\text{೨}})\}$$
$$=\tfrac{\text{೧}}{\text{೨}}(\text{೩೬}-\text{೩೮})$$
$$=\tfrac{\text{೧}}{\text{೨}}(-\text{೨})$$
$$=-\text{೧}.$$

ಉ. ೩. $(\text{ಯ}-\text{ರ})^{\text{೨}}+(\text{ರ}-\text{ವ})^{\text{೨}}+(\text{ವ}-\text{ಯ})^{\text{೨}}+\text{೨}(\text{ಯ}-\text{ರ})(\text{ರ}-\text{ವ})+\text{೨}(\text{ರ}-\text{ವ})(\text{ವ}-\text{ಯ})+\text{೨}(\text{ವ}-\text{ಯ})(\text{ಯ}-\text{ರ})$ ಈ ರಾಶಿಗೆ ಸರಳರೂಪವನ್ನು ಕೊಡಿರಿ.

$\text{ಯ}-\text{ರ}$, $\text{ರ}-\text{ವ}$, ಮತ್ತು $\text{ವ}-\text{ಯ}$ ಇವುಗಳನ್ನು ಅನುಕ್ರಮವಾಗಿ **ಪ, ಬ** ಮತ್ತು **ಮ** ಗಳಿಂದ ನಿರ್ದೇಶಿಸಿದರೆ ಕೊಟ್ಟ ರಾಶಿಯು

$$=\text{ಪ}^{\text{೨}}+\text{ಬ}^{\text{೨}}+\text{ಮ}^{\text{೨}}+\text{೨ಪಬ}+\text{೨ಬಮ}+\text{೨ಮಪ}$$
$$=(\text{ಪ}+\text{ಬ}+\text{ಮ})^{\text{೨}}$$
$$=(\text{ಯ}-\text{ರ}+\text{ರ}-\text{ವ}+\text{ವ}-\text{ಯ})^{\text{೨}}$$
$$=\text{೦}.$$

* ಈ ಉದಾಹರಣೆಯಲ್ಲಿ **ಪ, ಬ, ಮ** ಈ ಆದೇಶಗಳನ್ನು ತೆಗೆದುಕೊಳ್ಳದೇ ಸಹ ಮೇಲಿನ ಎರಡು ಹಂತಗಳನ್ನು ಬಿಟ್ಟು ಒಮ್ಮೆಲೇ ಈ ಹಂತವನ್ನು ನಾವು ಬರೆಯಬಹುದು.

**ಉ. ೪.** ಯ = ಕ + ಗ — ಅ, ರ = ಗ + ಅ — ಕ, ಸ = ಅ + ಕ — ಇದ್ದರೆ ಯ$^{೨}$ + ರ$^{೨}$ + ಸ$^{೨}$ + ೨ಯರ + ೨ರಸ + ೨ಸಯ = ಅ$^{೨}$ + ಕ$^{೨}$ + ಗ$^{೨}$ + ೨ಅಕ + ೨ಕಗ + ೨ಗಅ ಎಂದು ಸಿದ್ಧಮಾಡಿರಿ.

ಯ$^{೨}$ + ರ$^{೨}$ + ಸ$^{೨}$ + ೨ಯರ + ೨ರಸ + ೨ಸಯ

= (ಯ + ರ + ಸ)$^{೨}$

= (ಕ + ಗ — ಅ + ಗ + ಅ — ಕ + ಅ + ಕ — ಗ)$^{೨}$

= (ಅ + ಕ + ಗ)$^{೨}$

= ಅ$^{೨}$ + ಕ$^{೨}$ + ಗ$^{೨}$ + ೨ಅಕ + ೨ಕಗ + ೨ಗಅ.

## ಪ್ರಶ್ನಸಂಗ್ರಹ ೪.

೧. ಕ + ಗ + ಘ = ೮, ಮತ್ತು ಕ$^{೨}$ + ಗ$^{೨}$ + ಘ$^{೨}$ = ೩೦ ಇದ್ದರೆ ಕಗ + ಗಘ + ಘಕ = ?

೨. ತ + ದ + ನ = ೦, ತದ + ದನ + ನತ = — ೧೯ ಇದ್ದರೆ ತ$^{೨}$ + ದ$^{೨}$ + ನ$^{೨}$ = ?

೩. ಪ — ಬ + ಮ = ೬ ಮತ್ತು ಪಬ + ಬಮ — ಮಪ + ೧೧ = ೦ ಇದ್ದರೆ ಪ$^{೨}$ + ಬ$^{೨}$ + ಮ$^{೨}$ = ?

೪. ಅ + ಕ = ಗ + ೧ ಮತ್ತು ಗ(ಅ + ಕ) = ಅಕ + ೨೨ ಇದ್ದರೆ ಅ$^{೨}$ + ಕ$^{೨}$ + ಗ$^{೨}$ = ?

೫. ೨(ಯ + ರ + ಲ + ೧) = ಯ$^{೨}$ + ರ$^{೨}$ + ಲ$^{೨}$ = ೧೪ ಇದ್ದರೆ ಯರ + ರಲ + ಲಯ = ?

೬. $\frac{೧}{ಯ} + \frac{೧}{ರ} + \frac{೧}{ಲ}$ = —೪ ಮತ್ತು $\frac{೧}{ಯ^{೨}} + \frac{೧}{ರ^{೨}} + \frac{೧}{ಲ^{೨}}$ = ೧೪

ಇದ್ದರೆ $\frac{೧}{ಯರ} + \frac{೧}{ರಲ} + \frac{೧}{ಲಯ}$ = ?

೭. ಪ — ಬ — ಮ = $\frac{೧}{೨}$, ಮತ್ತು ಪಬ + ಪಮ — ಬಮ = $\frac{೩}{೪}$ ಇದ್ದರೆ ಪ$^{೨}$ + ಬ$^{೨}$ + ಮ$^{೨}$ = ?

ಮುಂದಿನ ರಾಶಿಗಳಿಗೆ ಸರಳರೂಪಗಳನ್ನು ಕೊಡಿರಿ.

೮. (ಪ — ೨ಬ)$^{೨}$ + (೨ಬ — ೩ಮ)$^{೨}$ + (೩ಮ — ೪ಪ)$^{೨}$ +

$೨(ಪ - ೨ಬ)(೨ಬ - ೩ಮ) + ೨(೨ಬ - ೩ಮ)(೩ಮ - ೪ಪ) + ೨(೩ಮ - ೪ಪ)(ಪ - ೨ಬ).$

೯. $ಕ^೨(ಗ - ಘ)^೨ + ಗ^೨(ಘ - ಕ)^೨ + ಘ^೨(ಕ - ಗ)^೨ + ೨ಕಗ(ಗ - ಘ)(ಘ - ಕ) + ೨ಗಘ(ಘ - ಕ)(ಕ - ಗ) + ೨ಘಕ(ಕ - ಗ)(ಗ - ಘ).$

೧೭. ಹಿಂದೆ (ಭಾ. ೨. ಪು. ೭೫) ನಾವು ತಿಳಿದುಕೊಂಡಿದ್ದೇನೆಂದರೆ ರಾಶಿಯಲ್ಲಿ ಎಷ್ಟೋ ಪದಗಳಿದ್ದರೂ ಆ ರಾಶಿಯ ವರ್ಗವು ಆ ಎಲ್ಲ ಪದಗಳ ವರ್ಗಗಳ ಬೇರೀಜು ಅಧಿಕ ಎರಡೆರಡು ಪದಗಳ ಗುಣಾಕಾರಗಳ ಇಮ್ಮಡಿಗಳ ಬೇರೀಜು ಎಂದು ಬರೆಯಲು ಬರುವದು. ಉದಾಹರಣೆಗಾಗಿ $ಪ + ಬ + ಭ + ಮ$ ದ ವರ್ಗವನ್ನು ಬರೆಯುವದು ಇದ್ದರೆ ಅದನ್ನು $ಪ^೨ + ಬ^೨ + ಭ^೨ + ಮ^೨ + ೨ಪಬ + ೨ಪಭ + ೨ಪಮ + ೨ಬಭ + ೨ಬಮ + ೨ಭಮ$ ಎಂದು ಒಮ್ಮೆಲೆ ಬರೆಯಲು ಬರುವದು ಮತ್ತು ಈ ಸಂಗತಿಯನ್ನು ಪ್ರತ್ಯಕ್ಷ ಗುಣಾಕಾರದಿಂದ ಇಲ್ಲಿನ ಕೆಳಗಿನಂತೆ ಸಿದ್ಧ ಮಾಡಲು ಬರುವದು.

$$(ಪ + ಬ + ಭ + ಮ)^೨$$
$$\equiv ಪ^೨ + ೨ಪ(ಬ + ಭ + ಮ) + (ಬ + ಭ + ಮ)^೨$$
$$\equiv ಪ^೨ + ೨ಪಬ + ೨ಪಭ + ೨ಪಮ + ಬ^೨ + ಭ^೨ + ಮ^೨ + ೨ಬಭ + ೨ಬಮ + ೨ಭಮ$$
$$\equiv ಪ^೨ + ಬ^೨ + ಭ^೨ + ಮ^೨ + ೨ಪಬ + ೨ಪಭ + ೨ಪಮ + ೨ಬಭ + ೨ಬಮ + ೨ಭಮ.$$

ಇದರಂತೆಯೇ ಯಾವದೇ ಬಹುಪದಿಯ ವರ್ಗದ ವಿಸ್ತಾರವನ್ನು ಒಮ್ಮೆಲೆ ಬರೆಯಲು ಬರುವದು. ಮುಂದಿನ ಸ್ವರೂಪಗಳಲ್ಲಿ ಈ ವಿಸ್ತಾರಗಳನ್ನು ಲಕ್ಷ್ಯದಲ್ಲಿ ಇಡುವದು ಹೆಚ್ಚು ಸುಲಭವಿರುವದು.

$$(ಪ + ಬ + ಮ)^೨ \equiv ಪ^೨ + ಬ^೨ + ಮ^೨ + ೨ಪ(ಬ + ಮ) + ೨ಬಮ;$$
$$(ಪ + ಬ + ಭ + ಮ)^೨$$
$$\equiv ಪ^೨ + ಬ^೨ + ಭ^೨ + ಮ^೨ + ೨ಪ(ಬ + ಭ + ಮ) + ೨ಬ(ಭ + ಮ) + ೨ಭಮ;$$

$(ಪ+ಫ+ಬ+ಭ+ಮ)^{೨} \equiv ಪ^{೨}+ಫ^{೨}+ಬ^{೨}+ಭ^{೨}+ಮ^{೨}+$
$೨ಪ(ಫ+ಬ+ಭ+ಮ)+೨ಫ(ಬ+ಭ+ಮ)+$
$೨ಬ(ಭ+ಮ)+೨ಭಮ.$

**ಉ. ೧.** $೨ಯ-೩ರ-ಲ+೫ಸ$ ದ ವರ್ಗದ ವಿಸ್ತಾರವನ್ನು ಮಾಡಿರಿ.

$(೨ಯ-೩ರ-ಲ+೫ಸ)^{೨}$
$=(೨ಯ)^{೨}+(-೩ರ)^{೨}+(-ಲ)^{೨}+(೫ಸ)^{೨}+೨.೨ಯ(-೩ರ)$
$+೨.೨ಯ(-ಲ)+೨.೨ಯ.೫ಸ+೨(-೩ರ)(-ಲ)$
$+೨(-೩ರ).೫ಸ+೨(-ಲ).೫ಸ$
$= ೪ಯ^{೨}+೯ರ^{೨}+ಲ^{೨}+೨೫ಸ^{೨}-೧೨ಯರ-೪ಯಲ+$
$೨೦ಯಸ+೬ರಲ+೩೦ರಸ+೧೦ಲಸ.$

* ರಾಶಿಗಳ ವರ್ಗಗಳ ವಿಸ್ತಾರಗಳನ್ನು ಬರೆಯುವ ಸಾಕಷ್ಟು ರೂಢಿಯು ಆದಮೇಲೆ ಈ ನಡುವಿನ ಹಂತದ ಆವಶ್ಯಕತೆಯೆನಿಸಲಿಕ್ಕಿಲ್ಲ.

**ಉ. ೨.** $(ಪ+ಮ)^{೬}$ ದ ವಿಸ್ತಾರವನ್ನು ಹೇಳಿರಿ.

$(ಪ+ಮ)^{೬}=\left\{(ಪ+ಮ)^{೩}\right\}^{೨}$
$=(ಪ^{೩}+೩ಪ^{೨}ಮ+೩ಪಮ^{೨}+ಮ^{೩})^{೨}$
$=ಪ^{೬}+೯ಪ^{೪}ಮ^{೨}+೯ಪ^{೨}ಮ^{೪}+ಮ^{೬}+೬ಪ^{೫}ಮ+$
$೬ಪ^{೪}ಮ^{೨}+೨ಪ^{೩}ಮ^{೩}+೧೮ಪ^{೩}ಮ^{೩}+೬ಪ^{೨}ಮ^{೪}+೬ಪಮ^{೫}$
$=ಪ^{೬}+೬ಪ^{೫}ಮ+೧೫ಪ^{೪}ಮ^{೨}+೨೦ಪ^{೩}ಮ^{೩}+$
$೧೫ಪ^{೨}ಮ^{೪}+೬ಪಮ^{೫}+ಮ^{೬}.$

## ಪ್ರಶ್ನಸಂಗ್ರಹ ೫.

ಕೆಳಗಿನ ರಾಶಿಗಳ ವರ್ಗಗಳ ವಿಸ್ತಾರಗಳನ್ನು ಬರೆಯಿರಿ:

೧. $ತ-ದ+ಧ+ನ.$ ೨. $೩ಪ-೪ಬ-ಭ-ಮ.$

೩. $೨ಪ-\frac{೧}{ಪ}-೪ಮ+\frac{೭}{ಮ}.$ ೪. $೫ಯ-ರ+೩ಲ-೧.$

ಕೆಳಗಿನ ವಿಸ್ತಾರಗಳನ್ನು ಹೇಳಿರಿ:-

೫. $(ಪ-ಮ)^{೬}.$ ೬. $(೨ಯ+ರ)^{೬}.$ ೭. $(ತ-೩ನ$

೮. $(೩ಯ-೨ಲ)^{೬}.$ ೯. $(೨ರ-೩ಸ)^{೬}$

## ೩.

$(ಪ+ಮ)(ಪ-ಮ)\equiv ಪ^{೨}-ಮ^{೨}$

೧೮. ನಾವು ಹಿಂದೆ (ಭಾಗ ೧, ಪ್ರ. ೯೯) ಯಾವುದೇ **ಎರಡು ಪದಗಳ ಬೇರಿಜು ಮತ್ತು ಅವುಗಳೊಳಗಿನ ಅಂತರ ಇವುಗಳ ಗುಣಾಕಾರವು ಅವುಗಳ ವರ್ಗಗಳೊಳಗಿನ ಅಂತರದಷ್ಟು ಇರುತ್ತದೆ** ಅಂದರೇಯೇ $(ಪ+ಮ)(ಪ-ಮ)\equiv ಪ^{೨}-ಮ^{೨}$ ಎಂದು ನೋಡಿದ್ದೇವೆ. ಅದೇ ಸೂತ್ರದ ಉಪಯೋಗವು ಸ್ವಲ್ಪದರಲ್ಲಿ ಉದಾಹರಣೆಗಳನ್ನು ಬಿಡಿಸುವ ಕಾರ್ಯದಲ್ಲಿ ಹೇಗೆ ಆಗುತ್ತದೆಂಬುದನ್ನು ಭಾ. ೨, ಪ್ರ. ೮೭-೮೮ ರಲ್ಲಿ ನೋಡಿದ್ದೇವೆ. ಅದೇ ಸೂತ್ರದ ಉಪಯೋಗವನ್ನು ಮಾಡಿ ಉಜಳಣೆಗಾಗಿ ಇಂದು ನಾವು ಇನ್ನೂ ಕೆಲವು ಉದಾಹರಣೆಗಳನ್ನು ಬಿಡಿಸುವಾ.

**ಉ. ೧.** ತ+ದ+೨ನ ಮತ್ತು ೨ನ−ತ−ದ ಇವುಗಳ ಗುಣಾಕಾರವನ್ನು ಮಾಡುವದಿದ್ದರೆ ತ ಮತ್ತು ದ ಈ ಎರಡೂ ರಾಶಿಗಳಲ್ಲಿ ಭಿನ್ನ ಚಿನ್ಹವಿರುವ ಎರಡು ಪದಗಳ ಒಂದು ಗುಂಪು ಎಂದು ಕಲ್ಪಿಸಿ ಮತ್ತು ಅವಶ್ಯವಿದ್ದಲ್ಲಿ ಆ ಗುಂಪಿನ ಉಲ್ಲೇಖವನ್ನು **ಪ** ಈ ಆದೇಶದಿಂದ ಮಾಡಿ, ಇಷ್ಟ ಗುಣಾಕಾರವನ್ನು ನಾವು ಕೆಳಗಿನಂತೆ ಬರೆಯುತ್ತೇವೆ.

$(ತ+ದ+೨ನ)(೨ನ-ತ-ದ)$

$=\{೨ನ+(ತ+ದ)\}\{೨ನ-(ತ+ದ)\}$

$=(೨ನ+ಪ)(೨ನ-ಪ)$ *

$=(೨ನ)^{೨}-(ಪ)^{೨}$ *

$=೪ನ^{೨}-(ತ+ದ)^{೨}$ [**ಪ** ದ ಬದಲಾಗಿ ತ+ದ ಬರೆದು

$=೪ನ^{೨}-(ತ^{೨}+೨ತದ+ದ^{೨})$

$=೪ನ^{೨}-ತ^{೨}-೨ತದ-ದ^{೨}$.

**ಉ. ೨.** ೫ಯ−೭ರ+೩ಸ ಮತ್ತು ೫ಯ+೭ರ−೩ಸ ಇವುಗಳ ಗುಣಾಕಾರವನ್ನು ಮಾಡುವದಿದ್ದರೆ, ೫ಯ, ದ ಹಿಂದಿನ ಚಿನ್ಹವು ಎರಡೂ ರಾಶಿಗಳಲ್ಲಿ ಒಂದೇ ಇದ್ದು ೭ರ ಮತ್ತು ೩ಸ ಇವುಗಳ ಹಿಂದಿನ ಚಿನ್ಹಗಳು ಭಿನ್ನ ಅಂ. ಮೊದಲನೆಯ ರಾಶಿಯಲ್ಲಿ ಅನುಕ್ರಮವಾಗಿ − ಮತ್ತು + ಮತ್ತು ಎರಡನೆಯ ರಾಶಿಯಲ್ಲಿ ಇದರ ವಿರುದ್ಧ ಅಂ. + ಮತ್ತು − ಇದ್ದುದರಿಂದ,

೭ರ — ೩ಸ ಇದೊಂದು ಗುಂಪು ಎಂದು ಕಲ್ಪಿಸಿ ಅವಶ್ಯವಿದ್ದರೆ ಅದರ ಉಲ್ಲೇಖ-ವನ್ನು **ಮ** ದಿಂದ ಮಾಡಿ, ಗುಣಾಕಾರವನ್ನು ಕೆಳಗಿನಂತೆ ಬರೆಯಲು ಬರುವದು.

$(೫ಯ - ೭ರ + ೩ಸ)(೫ಯ + ೭ರ - ೩ಸ)$
$= \{೫ಯ - (೭ರ - ೩ಸ)\}\{೫ಯ + (೭ರ - ೩ಸ)\}$
$= (೫ಯ - ಮ)(೫ಯ + ಮ)$ *
$= (೫ಯ)^{೨} - ಮ^{೨}$ *
$= ೨೫ಯ^{೨} - (೭ರ - ೩ಸ)^{೨}$ [∵ $ಮ = ೭ರ - ೩ಸ$
$= ೨೫ಯ^{೨} - (೪೯ರ^{೨} - ೪೨ರಸ + ೯ಸ^{೨})$
$= ೨೫ಯ^{೨} - ೪೯ರ^{೨} + ೪೨ರಸ - ೯ಸ^{೨}$.

**ಉ. ೩** $೨ಯ - ೪ರ - ೩ಲ + ೫ಸ$ ಮತ್ತು $೨ಯ + ೪ರ - ೩ಲ - ೫ಸ$ ಇವುಗಳ ಗುಣಾಕಾರವನ್ನು ಮಾಡಿರಿ.

ಇಲ್ಲಿ ಎರಡೂ ರಾಶಿಗಳಲ್ಲಿ ಅವೇ ಚಿನ್ಹಗಳಿರುವ ೨ಯ ಮತ್ತು ೩ಲ ಈ ಪದಗಳ ಒಂದು ಗುಂಪು ಮತ್ತು ಭಿನ್ನ ಚಿನ್ಹಗಳಿರುವ ೪ರ ಮತ್ತು ೫ಸ ಈ ಪದಗಳ ಎರಡನೇ ಗುಂಪನ್ನು ಮಾಡಿ ಮೊದಲನೇ ಗುಂಪಿನ ಬದಲಾಗಿ ಅಂ. ೨ಯ—೩ಲ ದ ಬದಲಾಗಿ **ಷ** ಎಂದೂ ಮತ್ತು ಎರಡನೆಯದರ ಬದಲಾಗಿ ಅಂ. ೪ರ — ೫ಸ, ಬದಲಾಗಿ **ಮ** ಎಂದು ಆದೇಶಗಳನ್ನು ಯೋಜಿಸಿದರೆ ಗುಣಾಕಾರ-ವನ್ನು ಕೆಳಗಿನಂತೆ ಬರೆಯಲು ಬರುವದು.

ಗುಣಾಕಾರವು =
$\{(೨ಯ - ೩ಲ) - (೪ರ - ೫ಸ)\}\{(೨ಯ - ೩ಲ) + (೪ರ - ೫ಸ)\}$
$= (ಷ - ಮ)(ಷ + ಮ)$ *
$= ಷ^{೨} - ಮ^{೨}$ *
$= (೨ಯ - ೩ಲ)^{೨} - (೪ರ - ೫ಸ)^{೨}$
$= (೪ಯ^{೨} - ೧೨ಯಲ + ೯ಲ^{೨}) - (೧೬ರ^{೨} - ೪೦ರಸ + ೨೫ಸ^{೨})$
$= ೪ಯ^{೨} - ೧೨ಯಲ + ೯ಲ^{೨} - ೧೬ರ^{೨} + ೪೦ರಸ - ೨೫ಸ^{೨}$.

* ಸ್ವಲ್ಪ ರೂಢಿಯಾದ ಮೇಲೆ ನಾವು ಈ ಹಂತಗಳನ್ನು ಸಹಜವಾಗಿ ಬಿಡಬಹುದು.

ಉ. ೪. ಬಿಡಿಸಿರಿ.

$(ಪ+ಬ+ಮ)(ಪ+ಬ-ಮ)(ಪ-ಬ+ಮ)$
$(-ಪ+ಬ+ಮ)$.

$(ಪ+ಬ+ಮ)(ಪ+ಬ-ಮ)(ಪ-ಬ+ಮ)$
$(-ಪ+ಬ+ಮ)$
$\equiv\{(ಪ+ಬ)+ಮ\}\{(ಪ+ಬ)-ಮ\}\{ಮ+(ಪ-ಬ)\}$
$\{ಮ-(ಪ-ಬ)\}$
$\equiv\{(ಪ+ಬ)^೨-ಮ^೨\}\{ಮ^೨-(ಪ-ಬ)^೨\}$
$\equiv(ಪ^೨+೨ಪಬ+ಬ^೨-ಮ^೨)(ಮ^೨-ಪ^೨+೨ಪಬ-ಬ^೨)$
$\equiv\{೨ಪಬ+(ಪ^೨+ಬ^೨-ಮ^೨)\}\{೨ಪಬ-(ಪ^೨+ಬ^೨-ಮ^೨)\}$
$\equiv(೨ಪಬ)^೨-(ಪ^೨+ಬ^೨-ಮ^೨)^೨$
$\equiv೪ಪ^೨ಬ^೨-(ಪ^೪+ಬ^೪+ಮ^೪+೨ಪ^೨ಬ^೨-೨ಬ^೨ಮ^೨-೨ಮ^೨ಪ^೨)$
$\equiv೨ಪ^೨ಬ^೨+೨ಬ^೨ಮ^೨+೨ಮ^೨ಪ^೨-ಪ^೪-ಬ^೪-ಮ^೪$.

ಈ **ನಿತ್ಯಸಮದ** ಉಪಯೋಗವು ಗುಣಪ್ರಕರಣದ ವಿಷಯದಲ್ಲಿ ಎಷ್ಟೋ ಸಲ ಆಗುತ್ತದೆ. ಆದುದರಿಂದ ಇದನ್ನು ಸ್ಥಿರವಾಗಿ ಲಕ್ಷ್ಯದಲ್ಲಿ ಇಡತಕ್ಕದ್ದು.

ಉ. ೫. ೬೧೨ ಕ್ಕೆ ೫೮೮ ರಿಂದ ಗುಣಿಸಿರಿ.

$೬೧೨\times೫೮೮$
$=(೬೦೦+೧೨)(೬೦೦-೧೨)$
$=(೬೦೦)^೨-(೧೨)^೨$
$=೩೬೦೦೦೦-೧೪೪$
$=೩೫೯೮೫೬$.

ಉ. ೬. $ಪ^೨+೨ಪಮ+೪ಮ^೨$ ಮತ್ತು $ಪ^೨-೨ಪಮ+೪ಮ^೨$ ಇವುಗಳ ಗುಣಾಕಾರವನ್ನು ಮಾಡಿರಿ.

$(ಪ^೨+೨ಪಮ+೪ಮ^೨)(ಪ^೨-೨ಪಮ+೪ಮ^೨)$
$=\{(ಪ^೨+೪ಮ^೨)+೨ಪಮ\}\{(ಪ^೨+೪ಮ^೨)-೨ಪಮ\}$

$=(ಪ^{೨}+೪ಮ^{೨})^{೨}-(೨ಪಮ)^{೨}$

$=ಪ^{೪}+೮ಪ^{೨}ಮ^{೨}+೧೬ಮ^{೪}-೪ಪ^{೨}ಮ^{೨}$

$=ಪ^{೪}+೪ಪ^{೨}ಮ^{೨}+೧೬ಮ^{೪}$.

## ಪ್ರಶ್ನಸಂಗ್ರಹ ೬.

ಕೆಳಗಿನ ರಾಶಿಗಳ ಗುಣಾಕಾರಗಳನ್ನು ಹೇಳಿರಿ :

೧. $೪ಯ+ರ-೫ಲ$, $೪ಯ-ರ+೫ಲ$.

೨. $೮ಪ-೩ಬ-೨ಮ$, $೩ಬ-೨ಮ-೮ಪ$.

೩. $೯ಕ+೨ಗ-೬ಘ$, $೨ಗ-೬ಘ-೯ಕ$.

೪. $೨ಕ-೫ಗ+೩$, $೨ಕ+೫ಗ-೩$.

೫. $ಅ+೧+\frac{೧}{ಅ}$, $ಅ-೧+\frac{೧}{ಅ}$.

೬. $೫ಲ^{೨}-೩ಲಸ+೪ಸ^{೨}$, $೫ಲ^{೨}+೩ಲಸ+೪ಸ^{೨}$.

೭. $೪ಪ+೨ಬ-೭ಭ-೩ಮ$, $೪ಪ-೨ಬ+೭ಭ-೩ಮ$.

೮. $೨ತ+೫ದ-೬ಧ+೩ನ$, $೨ತ-೫ದ-೬ಧ+೩ನ$.

೯. $ಅ^{೨}+ಅ+೧$, $ಅ^{೨}-ಅ+೧$, $ಅ^{೪}-ಅ^{೨}+೧$.

೧೦. $೧+೨ಪ+೪ಪ^{೨}$, $೧-೨ಪ+೪ಪ^{೨}$, $೧-೪ಪ^{೨}+೧೬ಪ^{೪}$.

೧೧. $೧೬ಯ^{೮}+ರ^{೮}$, $೨ಯ^{೨}+೨ಯರ+೨ರ^{೨}$, $೨ಯ^{೨}-೨ಯರ+ರ^{೨}$, $೨ಯ^{೨}+ರ^{೨}$, $೨ಯ^{೨}-ರ^{೨}$.

ಬಿಡಿಸಿರಿ:

೧೨. $೮೬\times೧೧೪$. ೧೩. $೭೭೫\times೮೨೫$. ೧೪. $೩೯\times೪೧\times೧೬೦೧$.

## ೪.

## $(ಪ\pm ಮ)^{೩}\equiv ಪ^{೩}\pm ಮ^{೩}\pm ೩ಪಮ(ಪ\pm ಮ)$

೧೯. ಹಿಂದಿನ ಭಾಗದಲ್ಲಿಯ ನಾಲ್ಕನೆಯ ಪ್ರಕರಣದಲ್ಲಿ (ಭಾ. ೨. ಪು. ೬೪,೬೬) ಯಾವದೇ ದ್ವಿಪದದ ಘನದ ವಿಸ್ತಾರವನ್ನು ಮೇಲಿನ ಸ್ವರೂಪದಲ್ಲಿ ಹೇಗೆ ಬರೆಯಲು ಬರುತ್ತದೆ ಎಂಬುದನ್ನು ನಾವು ನೋಡಿದ್ದೇವೆ. ವಿಶಿಷ್ಟ ತರಹದ ಉದಾಹರಣೆಗಳನ್ನು ಬೇಗನೆ ಬಿಡಿಸುವ ಕೆಲಸದಲ್ಲಿ ಅವುಗಳ ಉಪಯೋಗವು ಹೇಗಾಗುತ್ತದೆ ಎಂಬುದನ್ನಾದರೂ ನಾವು ಅದರ ಮುಂದಿನ

ಪ್ರಕರಣದಲ್ಲಿ (ಪು. ೧೫–೧೯) ನೋಡಿದ್ದೇವೆ. ಇಂದು ಈಗ ಅದೇ ಸಂಗತಿಯ ತಿರುಗಿ ಉಜಳಣಿಯನ್ನು ಮಾಡಿ ತರುವಾಯ ಆ ವಿಷಯದ ವಿಚಾರವನ್ನು ಇನ್ನೂ ಮುಂದೆ ಮಾಡುವಾ.

ನಮಗೆ ಪ+ಬ+ಮ ಇಂತಹ ಯಾವದಾದರೊಂದು ತ್ರಿಪದಿಯ ಘನದ ವಿಸ್ತಾರವನ್ನು ಬರೆಯುವದಿದ್ದರೆ ಈ ಸೂತ್ರದ ಉಪಯೋಗವನ್ನು ಮಾಡಿ ನಮಗೆ ಅದನ್ನು ಒಮ್ಮೆಲೆ ಬರೆಯಲು ಬರುತ್ತದೆ ಎಂಬುದನ್ನು ನಾವು ಹಿಂದೆ ನೋಡಿದ್ದೇವೆ. ಪ+ಬ ಇದರ ಬದಲಾಗಿ ಅ ಈ ಆದೇಶವನ್ನು ಇಟ್ಟರೆ,

$(ಪ+ಬ+ಮ)^{೩}=(ಅ+ಮ)^{೩}$

$=ಅ^{೩}+ಮ^{೩}+೩ಅ^{೨}ಮ+೩ಅಮ^{೨}$

$=(ಪ+ಬ)^{೩}+ಮ^{೩}+೩(ಪ+ಬ)^{೨}ಮ+೩(ಪ+ಬ)ಮ^{೨}$ [ $\because$ ಅ=ಪ+ಬ

$=ಪ^{೩}+ಬ^{೩}+೩ಪಬ(ಪ+ಬ)+ಮ^{೩}+೩(ಪ^{೨}+ಬ^{೨}+೨ಪಬ)ಮ+$
$+೩(ಪ+ಬ)ಮ^{೨}$

$=ಪ^{೩}+ಬ^{೩}+ಮ^{೩}+೩ಪಬ(ಪ+ಬ)+೩(ಪ^{೨}+ಬ^{೨})ಮ+೬ಪಬಮ$
$+೩(ಪ+ಬ)ಮ^{೨}$

$=ಪ^{೩}+ಬ^{೩}+ಮ^{೩}+೩ಪ^{೨}ಬ+೩ಪಬ^{೨}+೩ಮಪ^{೨}+೩ಬ^{೨}ಮ+$
$೬ಪಬಮ+೩ಮ^{೨}ಪ+೩ಬಮ^{೨}$

$=ಪ^{೩}+ಬ^{೩}+ಮ^{೩}+೩ಪ^{೨}ಬ+೩ಪಬ^{೨}+೩ಬ^{೨}ಮ+೩ಬಮ^{೨}+$
$೩ಮ^{೨}ಪ+೩ಮಪ^{೨}+೬ಪಬಮ.$

ಇದೇ ವಿಸ್ತಾರವನ್ನು $ಪ^{೩}+ಬ^{೩}+ಮ^{೩}+೩ಪಬ(ಪ+ಬ)+೩ಬಮ(ಬ+ಮ)+೩ಮಪ(ಮ+ಪ)+೬ಪಬಮ$ ಎಂದೂ ಇಲ್ಲವೆ $ಪ^{೩}+ಬ^{೩}+ಮ^{೩}+೩ಪ^{೨}(ಬ+ಮ)+೩ಬ^{೨}(ಮ+ಪ)+೩ಮ^{೨}(ಪ+ಬ)+೬ಪಬಮ$ ಎಂದೂ ಇಲ್ಲವೆ ಕೆಳಗೆ ತೋರಿಸಿದಂತೆ $ಪ^{೩}+ಬ^{೩}+ಮ^{೩}+೩(ಪ+ಬ)(ಬ+ಮ)(ಮ+ಪ)$ ಈ ಸ್ವರೂಪದಲ್ಲಿಯೂ ಬರೆಯಲು ಬರುವದು.

$(ಪ+ಬ+ಮ)^{೩}$

$=\{(ಪ+ಬ)+ಮ\}^{೩}$

$=(ಪ+ಬ)^{೩}+ಮ^{೩}+೩ಮ(ಪ+ಬ)(ಪ+ಬ+ಮ)$

$\equiv ಪ^{೩} + ಬ^{೩} + ೩ಪಬ(ಪ + ಬ) + ಮ^{೩} + ೩ಮ(ಪ + ಬ)(ಪ + ಬ + ಮ)$
$\equiv ಪ^{೩} + ಬ^{೩} + ಮ^{೩} + ೩(ಪ + ಬ)\{ಪಬ + ಮ(ಪ + ಬ + ಮ)\}$
$\equiv ಪ^{೩} + ಬ^{೩} + ಮ^{೩} + ೩(ಪ + ಬ)\{ಪ(ಬ + ಮ) + ಮ(ಬ + ಮ)\}$
$\equiv ಪ^{೩} + ಬ^{೩} + ಮ^{೩} + ೩(ಪ + ಬ)(ಬ + ಮ)(ಮ + ಪ)$.

ತ್ರಿಪದದ ಘನದ ವಿಸ್ತಾರದ ಈ ನಾಲ್ಕೂ ರೂಪಗಳು ಉಪಯೋಗವಾಗುತ್ತಿರುವದರಿಂದ ಅವುಗಳನ್ನು ಲಕ್ಷ್ಯದಲ್ಲಿಡುವದು ಇಷ್ಟವಾದುದು.

**೧·೧೦.** $(ಪ + ಮ)^{೩} \equiv ಪ^{೩} + ಮ^{೩} + ೩ಪಮ(ಪ + ಮ)$

ಮತ್ತು $(ಪ - ಮ)^{೩} \equiv ಪ^{೩} - ಮ^{೩} - ೩ಪಮ(ಪ - ಮ)$

ಈ **ನಿತ್ಯಸಮ**ಗಳ ಮೇಲಿಂದ ಪಕ್ಷಾಂತರದಿಂದ ನಮಗೆ ಅನುಕ್ರಮವಾಗಿ $ಪ^{೩} + ಮ^{೩} \equiv (ಪ + ಮ)^{೩} - ೩ಪಮ(ಪ + ಮ)$ ಮತ್ತು $ಪ^{೩} - ಮ^{೩} \equiv (ಪ - ಮ)^{೩} + ೩ಪಮ(ಪ - ಮ)$ ಈ **ನಿತ್ಯಸಮಗಳು** ದೊರೆಯುವವು. ಇವುಗಳ ಉಪಯೋಗವು ಆಗಾಗ್ಗೆ ಆಗುತ್ತಿರುವದರಿಂದ ಅವುಗಳನ್ನು ಚನ್ನಾಗಿ ಲಕ್ಷ್ಯದಲ್ಲಿಡತಕ್ಕದ್ದು.

**೧·೧೧.** ಮೂರರಿಗಿಂತ ಹೆಚ್ಚು ಪದಗಳಿರುವ ಯಾವದೇ ರಾಶಿಯ ಘನದ ವಿಸ್ತಾರವನ್ನು $(ಪ + ಮ)^{೩}$ ದ ಇಲ್ಲವೆ $(ಪ + ಬ + ಮ)^{೩}$ ದ ವಿಸ್ತಾರದ ಸಹಾಯದಿಂದ ನಮಗೆ ಒಮ್ಮೆಲೆ ಬರೆಯಲು ಬರುವದು. ಇದರ ಚರ್ಚೆಯನ್ನು ಹಿಂದೆ ವಿಸ್ತೃತವಾಗಿ ಮಾಡಿದ್ದೇವೆ.

ಈಗ $(ಪ \pm ಮ)^{೩} \equiv ಪ^{೩} \pm ಮ^{೩} \pm ೩ಪಮ(ಪ \pm ಮ)$

ಈ ಮತ್ತು ಇದರಿಂದ ಸಿದ್ಧವಾದ ಬೇರೆ ಸೂತ್ರಗಳ ಉಪಯೋಗಗಳನ್ನು ಮಾಡಿ ಮುಂದೆ ಕೆಲವು ಉದಾಹರಣೆಗಳನ್ನು ಹೇಗೆ ಬಿಡಿಸಿದೆ ಎಂಬುದನ್ನು ನೋಡಿರಿ.

**ಉ. ೧.** $(ಯ + ರ)^{೩} - ೩(ಯ + ರ)^{೨}(ಯ - ರ) + ೩(ಯ + ರ)(ಯ - ರ)^{೨} - (ಯ - ರ)^{೩}$ ಈ ರಾಶಿಗೆ ಸರಳ ರೂಪವನ್ನು ಕೊಡಿರಿ.

ಯ + ರ ಮತ್ತು ಯ − ರ ಗಳ ನಿರ್ದೇಶವನ್ನು ಅನುಕ್ರಮವಾಗಿ **ಪ** ಮತ್ತು **ಮ** ದಿಂದ ಮಾಡಿದರೆ, ರಾಶಿಯು $\equiv ಪ^{೩} - ೩ಪ^{೨}ಮ + ೩ಪಮ^{೨} - ಮ^{೩}$ *

= (ಪ − ಮ)$^{೩}$ *

= {(ಯ + ರ) − (ಯ − ರ)}$^{೩}$ [∵ ಪ = ಯ + ರ ಮತ್ತು ಮ = ಯ − ರ]

= (೨ರ)$^{೩}$

= ೮ರ$^{೩}$.

**ಉ. ೨.** ೮(೩ಕ − ೫ಗ) + ೩೬(೩ಕ − ೫ಗ)$^{೨}$(೩ಗ − ೨ಕ)

+ ೫೪(೩ಕ − ೫ಗ)(೩ಗ − ೨ಕ)$^{೨}$ + ೨೭(೩ಗ − ೨ಕ)$^{೩}$

ಈ ರಾಶಿಗೆ ಸರಳ ರೂಪವನ್ನು ಕೊಡಿರಿ.

೨(೩ಕ − ೫ಗ) ದ ನಿರ್ದೇಶವನ್ನು ಪ ದಿಂದ ಮತ್ತು ೩(೩ಗ − ೨ಕ) ದ ನಿರ್ದೇಶವನ್ನು ಮ ದಿಂದ ಮಾಡಿದರೆ,

ರಾಶಿಯು = ಪ$^{೩}$ + ೩ಪ$^{೨}$ಮ + ೩ಪಮ$^{೨}$ + ಮ$^{೩}$

= (ಪ + ಮ)$^{೩}$ *

= {೨(೩ಕ − ೫ಗ) + ೩(೩ಗ − ೨ಕ)}$^{೩}$

= (೬ಕ − ೧೦ಗ + ೯ಗ − ೬ಕ)$^{೩}$

= (− ಗ)$^{೩}$

= − ಗ$^{೩}$.

**ಉ. ೩.** (ಯ − ರ + ಸ)$^{೩}$ − ೩(ಯ − ರ + ಸ)$^{೨}$(ಯ + ರ + ಸ)

+ ೩(ಯ − ರ + ಸ)(ಯ + ರ + ಸ)$^{೨}$ − (ಯ + ರ + ಸ)$^{೩}$

ಈ ರಾಶಿಗೆ ಸರಳ ರೂಪವನ್ನು ಕೊಡಿರಿ.

ಯ − ರ + ಸ ದ ಪ ದಿಂದ ಮತ್ತು ಯ + ರ + ಸ ದ ಮ ದಿಂದ ನಿರ್ದೇಶವನ್ನು ಮಾಡಿದರೆ,

ರಾಶಿಯು = ಪ$^{೩}$ − ೩ಪ$^{೨}$ಮ + ೩ಪಮ$^{೨}$ − ಮ$^{೩}$ *

= (ಪ − ಮ)$^{೩}$ *

= {(ಯ − ರ + ಸ) − (ಯ + ರ + ಸ)}$^{೩}$

= (− ೨ರ)$^{೩}$

= − ೮ರ$^{೩}$.

* **ಪ, ಮ** ಈ ಅಕ್ಷರಗಳನ್ನು ಉಪಯೋಗಿಸದೆ ಈ ಹಂತಗಳನ್ನು ನಮಗೆ ಬಿಡಲು ಬರುವದು.

**ಉ. ೪.** ಯ + ರ = ೭, ಮತ್ತು ಯರ = ೧೨ ಇದ್ದರೆ $ಯ^೩ + ರ^೩ = ?$

$ಯ^೩ + ರ^೩ = (ಯ + ರ)^೩ - ೩ಯರ(ಯ + ರ)$

$= ೭^೩ - ೩ \times ೧೨ \times ೭$

$= ೩೪೩ - ೨೫೨$

$= ೯೧.$

**ಉ. ೫.** $ಪ = ೧೩\frac{೧}{೫}$ ಮತ್ತು $ಮ = ೧೬\frac{೧}{೪}$ ಇದ್ದರೆ

$೧೨೫ಪ^೩ - ೩೦೦ಪ^೨ಮ + ೨೪೦ಪಮ^೨ - ೬೪ಮ^೩ = ?$

$೧೨೫ಪ^೩ - ೩೦೦ಪ^೨ಮ + ೨೪೦ಪಮ^೨ - ೬೪ಮ^೩$

$= (೫ಪ)^೩ - ೩(೫ಪ)^೨.೪ಮ + ೩.೫ಪ(೪ಮ)^೨ - (೪ಮ)^೩$

$= (೫ಪ - ೪ಮ)^೩$

$= (೫ \times ೧೩\frac{೧}{೫} - ೪ \times ೧೬\frac{೧}{೪})^೩$

$= (೬೬ - ೬೫)^೩$

$= (೧)^೩$

$= ೧.$

**ಉ. ೬.** $ಯ - \frac{೧}{ಯ} = ೧\frac{೧}{೩}$ ಇದ್ದರೆ $ಯ^೩ - \frac{೧}{ಯ^೩} = ?$

$ಯ^೩ - \frac{೧}{ಯ^೩} = \left(ಯ - \frac{೧}{ಯ}\right)^೩ + ೩ಯ.\frac{೧}{ಯ}(ಯ - \frac{೧}{ಯ})$

$= (ಯ - \frac{೧}{ಯ})^೩ + ೩(ಯ - \frac{೧}{ಯ})$

$= (\frac{೪}{೩})^೩ + ೩ \times \frac{೪}{೩}$

$= \frac{೬೪}{೨೭} + \frac{೧೨}{೩}$

$= ೨\frac{೧೦}{೨೭} + ೪\frac{೦}{೩}$

$= ೬\frac{೧೦}{೨೭}.$

**ಉ. ೭.** $ಪ + \frac{೧}{ಪ} = ಅ$ ಇದ್ದರೆ

$ಪ^೩ + \frac{೧}{ಪ^೩} = ಅ - ೩ಅ^೩$ ಎಂದು ಸಿದ್ಧಮಾಡಿರಿ.

$$ಪ + \frac{೧}{ಪ} = ಅ$$

ಘನಮಾಡಿ, $ಪ^೩ + \frac{೧}{ಪ^೩} + ೩ಪ\cdot\frac{೧}{ಪ}\left(ಪ + \frac{೧}{ಪ}\right) = ಅ^೩$

$$\therefore ಪ^೩ + \frac{೧}{ಪ^೩} + ೩ಅ^೩ = ಅ$$

ಪಕ್ಷಾಂತರದಿಂದ, $ಪ^೩ + \frac{೧}{ಪ^೩} = ಅ^೩ - ೩ಅ.$

ಉ. ೮. $ಯ + ರ = ೩$ ಇದ್ದರೆ

$ಯ^೩ + ರ^೩ + ೯ಯರ = ೨೭$ ಎಂದು ಸಿದ್ಧಮಾಡಿರಿ.

$$ಯ + ರ = ೩$$

ಘನಮಾಡಿದರೆ, $ಯ^೩ + ರ^೩ + ೩ಯರ(ಯ + ರ) = ೨೭$

$\therefore ಯ^೩ + ರ^೩ + ೩ಯರ(೩) = ೨೭ \; [\because ಯ + ರ = ೩$

$\therefore ಯ^೩ + ರ^೩ + ೯ಯರ = ೨೭.$

ಉ. ೯. $(೫ಕ - ೩ಗ)^೩ - (೩ಕ - ೫ಗ)^೩ - ೬(೫ಕ - ೩ಗ)(೩ಕ - ೫ಗ)$

$(ಕ + ಗ)$ ಈ ರಾಶಿಗೆ ಸರಳ ರೂಪವನ್ನು ಕೊಡಿರಿ

೫ಕ ೩ಗ ದ ನಿರ್ದೇಶವನ್ನು **ಪ** ದಿಂದ ಮತ್ತು

೩ಕ-೫ಗ ದ **ಮ** ದಿಂದ ಮಾಡಿದರೆ

$ಪ - ಮ = (೫ಕ - ೩ಗ) - (೩ಕ - ೫ಗ) =$

$೫ಕ - ೩ಗ - ೩ಕ + ೫ಗ = ೨ಕ - ೨ಗ = ೨(ಕ - ಗ)$. ಮತ್ತು

ರಾಶಿಯು $= ಪ^೩ - ಮ^೩ - ೩ಪಮ(ಪ - ಮ)$

$= (ಪ - ಮ)^೩$

$= \{೨(ಕ + ಗ)\}^೩ \; [\because ಪ - ಮ = ೨(ಕ - ಗ)$

$= ೮(ಕ^೩ + ೩ಕ^೨ಗ + ೩ಕಗ^೨ + ಗ^೩).$

## ಪ್ರಶ್ನಸಂಗ್ರಹ ೭.

ಕೆಳಗಿನ ರಾಶಿಗಳ ಘನಗಳ ವಿಸ್ತಾರಗಳನ್ನು ಹೇಳಿರಿ.

(ಮೊದಲಿನ ಉದಾಹರಣೆಗಳು ಬಾಯಿಯಿಂದ ಬಿಡಿಸುವಂಥವವಿವೆ.)

೧. ೩ಯ + ೨. ೨. ೮ರ − ೩. ೩. ೩ಯ + ೪ಕ್ಷ.

೪. ಪ+೨ಬ+೩ಮ. ೫. ೩ಪ−ಬ−೪ಮ. ೬. ೫ಯ−೨ರ+೩ಸ.

೭. ಪ²−ಪ−೧. ೮. ಪ²+ಪಮ+ಮ². ೯. ೩ಯ²+೨ಯ+೧.

ಸರಳರೂಪವನ್ನು ಕೊಡಿರಿ :

೧೦. (ಯ−ನ)³ −(ಯ−ಮ)³ +೩(ನ−ಮ)(ಯ−ನ)(ಯ−ಮ).

೧೧. (೨ನ−೩ಮ)³ −(೩ನ−೨ಮ)³ +೩(೨ನ−೩ಮ)(೩ನ−೨ಮ) (ನ+ಮ).

೧೨. ೮(ನ−೪ಮ)³ −೧೨(ನ−೪ಮ)²(೪ನ−ಮ)+ ೬(ನ−೪ಮ)(೪ನ−ಮ)² −(ನ−೪ಮ)³.

೧೩. (ಯ+ರ+ಸ)³ +(ಯ+ರ−ಸ)³ − ೬(ರ+ಸ)(ಯ+ರ+ಸ)(ಯ−ರ+ಸ).

೧೪. (ಯ+ಅ−ಜ)³ −(ಯ−ಅ+ಜ)³ − ೬(ಅ−ಜ)²−(ಯ+ಅ−ಜ)(ಯ−ಅ+ಜ).

೧೫. ಪ+ಮ=೫ ಮತ್ತು ಪಮ=೬ ಇದ್ದರೆ ಪ³+ಮ³=?

೧೬. ತ+ದ=೧ ಮತ್ತು ತದ= ೧/೪ ಇದ್ದರೆ ತ³+ದ³=?

೧೭. ನ−ಮ= −೩ ಮತ್ತು ನಮ= −೨ ಇದ್ದರೆ ನ³−ಮ³=?

೧೮. ನ+ ೧/ನ = −೨ ಇದ್ದರೆ ನ+ ೧/ನ² =?

೧೯. ಪ− ೧/ಪ =೨ ೧/೨ ಇದ್ದರೆ ಪ³ − ೧/ಪ³ = ?

೨೦. ನ− ೧/ನ =೧ ೧/೩ ಇದ್ದರೆ ನ³ − ೧/ನ³ = ?

೨೧. ಮ=೫ ಇದ್ದರೆ ಮ³ −೧೫ಮ² +೭೫ಮ −೧೨೫= ?

೨೨. ನ= ೨/೩ ಇದ್ದರೆ ನ³ +ನ² + ೧/೩ ನ+ ೧/೨೭ = ?

೨೩. ನ=೨, ಮ=೩ ಇದ್ದರೆ ೨೭ನ³ −೫೪ನ²ಮ +೩೬ನಮ² −೮ಮ³= ?

೨೪. ರ=೬ ೧/೩, ಸ=−೧ ೧/೪ ಇದ್ದರೆ
೮ರ³ +೩೬ರ²ಸ +೫೪ರಸ² +೨೭ಸ³ +೧೨೫= ?

೨೫. ನ+ಮ=೭ ಇದ್ದರೆ
ನ³ +ಮ³ +೨೧ನಮ=೩೪೩ ಎಂದು ಸಿದ್ಧ ಮಾಡಿರಿ.

೨೬. ತ − ದ = ೮ ಇದ್ದರೆ

ತ$^3$ − ದ$^3$ − ೨೪ತದ = ೫೧೨ ಎಂದು ಸಿದ್ಧಮಾಡಿರಿ.

೨೭. ಕ + ಗ = ೩ ಇದ್ದರೆ

ಕ$^3$ + ಗ$^3$ + ೯ಕಗ = ?

೨೮. ಪ − ಮ = −೪ ಇದ್ದರೆ

ಪ$^3$ − ಮ$^3$ + ೧೨ಪಮ = ?

೨೯. ಪ$^2$ − ಬ$^2$ = ಮ$^2$ ಇದ್ದರೆ

ಪ$^6$ − ಬ$^6$ − ೩ಪ$^2$ಬ$^2$ಮ$^2$ = ಮ$^6$ ಎಂದು ಸಿದ್ಧಮಾಡಿರಿ.

೩೦. ೨ನ + ಮ = ೪ ಇದ್ದರೆ

೮ನ$^3$ + ಮ$^3$ + ೨೪ನಮ − ೬೪ = ೦ ಎಂದು ಸಿದ್ಧಮಾಡಿರಿ.

೩೧. ೩ನ − ೨ಮ = ೨ ಇದ್ದರೆ

೨೭ನ$^3$ − ೮ಮ$^3$ − ೩೬ನಮ = ೮ ಎಂದು ಸಿದ್ಧಮಾಡಿರಿ.

೫.

**(ಯ + ಪ)(ಯ + ಬ)(ಯ + ಮ) ≡ ಯ$^3$ + (ಪ + ಬ + ಮ)ಯ$^2$ + (ಪಬ + ಬಮ + ಮಪ)ಯ + ಪಬಮ.**

೧·೧೩. ಹಿಂದೆ (ಭಾ. ೨. ಪ್ರ·೭೪, ೭೫) ಯಾವುಗಳಿಗೆ ಒಂದು ಪದವು ಸಾಧಾರಣವಿರುವದೋ ಅಂಥ ಮೂರು ದ್ವಿಪದಿಗಳ ಗುಣಾಕಾರವನ್ನು ಮೇಲೆ ತೋರಿಸಿದಂತೆ ಒಮ್ಮೆಲೆ ಹೀಗೆ ಬರೆಯಲು ಬರುತ್ತದೆ ಎಂಬುದನ್ನು ಮುಂದಿನಂತೆ ಸಿದ್ಧಮಾಡಿದೆ.

(ಯ + ಪ) (ಯ + ಬ) (ಯ + ಮ)

≡ (ಯ$^2$ + ಪಯ + ಬಯ + ಪಬ)(ಯ + ಮ)

≡ ಯ$^3$ + ಪಯ$^2$ + ಬಯ$^2$ + ಪಬಯ + ಮಯ$^2$ + ಮಪಯ + ಬಮಯ + ಪಬಮ .

≡ ಯ$^3$ + (ಪಯ$^2$ + ಬಯ$^2$ + ಮಯ$^2$) + (ಪಬಯ + ಬಮಯ + ಮಪಯ) + ಪಬಮ.

≡ ಯ$^3$ + (ಪ + ಬ + ಮ)ಯ$^2$ + (ಪಬ + ಬಮ + ಮಪ)ಯ + ಪಬಮ

**ಯಾವುಗಳಲ್ಲಿ ಒಂದು ಪದವು ಸಾಧಾರಣವಿರುವದೋ ಅಂಥ ಮೂರು ದ್ವಿಪದಿಗಳ ಗುಣಾಕಾರವು ಸಾಧಾರಣ ಪದದ ಘನ+ ಸಾಧಾರಣ ಪದದ ವರ್ಗ ಗುಣಿಲೆ ಬೇರೆ ಮೂರು ಪದಗಳ ಬೇರೀಜು + ಸಾಧಾರಣ ಪದ ಗುಣಿಲೆ ಬೇರೆ ಮೂರು ಪದಗಳೊಳಗಿನ ಎರಡೆರಡರ ಗುಣಾಕಾರಗಳ ಬೇರೀಜು + ಆ ಮೂರೂ ಭಿನ್ನ ಪದಗಳ ಗುಣಾಕಾರದಷ್ಟು ಇರುತ್ತದೆ.**

ಇಂದು ಇದೇ ಸಂಗತಿಯ ಸ್ವಲ್ಪ ಉಜಳಣೆಯನ್ನು ಮಾಡುವಾ. ಮೇಲಿನ ಸೂತ್ರದ ಸಹಾಯದಿಂದ ಮುಂದಿನ ಗುಣಾಕಾರಗಳನ್ನು ಹೇಗೆ ಬರೆದಿದೆ ಎಂಬುದನ್ನು ನೋಡಿರಿ.

ಉ. ೧. (ಯ+೧)(ಯ+೩)(ಯ+೬)

$=$ ಯ$^3$+(೧+೩+೬)ಯ$^2$+(೧·೩+೩·೬+೬·೧)ಯ +೧.೩·೬

$=$ ಯ$^3$+೧೦ಯ$^2$+೨೭ಯ+೧೮.

ಉ. ೨. (ರ+೨) (ರ−೪) (ರ+೮)

$=$ ರ$^3$+(೨−೪+೮)ರ$^2$+(−೨.೪−೪·೮+೮·೨)ರ −೨·೪·೮

$=$ ರ$^3$+೬ರ$^2$−೨೪ರ−೬೪.

ಉ. ೩. (ಸ−೩) (ಸ+೫)(ಸ−೧೦)

$=$ ಸ$^3$+(−೩+೫−೧೦)ಸ$^2$+ (−೩.೫−೫.೧೦+೧೦.೩)ಸ+೧೫೦.

$=$ ಸ$^3$+೮ಸ$^2$+೩೫ಸ+೧೫೦.

ಉ. ೪. (ನ−೮)(ನ+೫)(ನ−೨) ಈ ಗುಣಾಕಾರವನ್ನು ಮಾಡುವದಿದ್ದರೆ,

(−೮)+೫+(−೨)=−೫,

(−೮)·೫+೫.(−೨)+(−೨)(−೮)=−೪೦−೧೦+ ೧೬=−೩೪,

ಮತ್ತು (−೮).೫.(−೨)=೮೦, ಇದ್ದುದರಿಂದ

ಇಷ್ಟ ಗುಣಾಕಾರವು= ನ$^3$−೫ನ$^2$−೩೪ನ+೮೦.

ಉ. ೫. $(ಪ-೭ಅ)(ಪ+೫ಅ)(ಪ-೩ಅ)$

$=ಪ^{3}+(-೭ಅ+೫ಅ-೩ಅ)ಪ^{2}+$

$(-೭ಅ.೫ಅ+೫ಅ.೩ಅ+೩ಅ.೭ಅ)ಪ+(-೭ಅ)(೫ಅ)(-೩ಅ)$

$=ಪ^{3}-೫ಅಪ^{2}-೨೯ಅ^{2}ಪ+೧೦೫ಅ^{3}.$

ಉ. ೬. $(ಅ-೧೧)(ಅ-೬)(ಅ-೨)-(ಅ-೬)^{2}(ಅ-೭)$

ಈ ರಾಶಿಗೆ ಸರಳ ರೂಪವನ್ನು ಕೊಡಿರಿ.

$(ಅ-೧೧)(ಅ-೬)(ಅ-೨)$

$=ಅ^{3}-(೧೧+೬+೨)ಅ^{2}+(೧೧\cdot೬+೬\cdot೨+೨\cdot೧೧)ಅ$

$-೧೧.೬.೨$

$=ಅ^{3}-೧೯ಅ^{2}+೧೦೦ಅ-೧೩೨$

$(ಅ-೬)^{2}(ಅ-೭)$

$=ಅ^{3}-(೬+೬+೭)ಅ^{2}+(೬\cdot೬+೬\cdot೭+೭\cdot೬)ಅ-೬\cdot೬\cdot೭$

$=ಅ^{3}-೧೯ಅ^{2}+೧೨೦ಅ-೨೫೨$

$\therefore$ ರಾಶಿಯು$=(ಅ^{3}-೧೯ಅ^{2}+೧೨೦ಅ-೧೩೨)$

$-(ಅ^{3}-೧೯ಅ^{2}+೧೨೦ಅ-೨೫೨)$

$=-೨೦ಅ+೧೨೦.$

ಇಲ್ಲಿನ, ಕೊಟ್ಟ ರಾಶಿಯ ಎರಡೂ ಭಾಗಗಳಲ್ಲಿ $ಅ-೬$ ಇದು ಸಾಧಾರಣ ಅವಯವವಿರುವದು. ಈ ಸಂಗತಿಯನ್ನು ಲಕ್ಷ್ಯದಲ್ಲಿಟ್ಟರೆ

ರಾಶಿಯು$=(ಅ-೬)\{(ಅ-೧೧)(ಅ-೨)-(ಅ-೬)(ಅ-೭)\}$

$=(ಅ-೬)\{(ಅ^{2}-೧೩ಅ+೨೨)-(ಅ^{2}-೧೩ಅ+೪೨)\}$

$=-೨೦(ಅ-೬)$

ಇಲ್ಲಿ ಎರಡನೇ ರೀತಿಯು ಮೊದಲನೆಯದರಗಿಂತ ಹೆಚ್ಚು ಸುಲಭ ಮತ್ತು ಶೀಘ್ರವೆಂದು ಕಂಡುಬರುವದು.

## ಪ್ರಶ್ನಸಂಗ್ರಹ ೮.

ಕೆಳಗಿನ ದ್ವಿಪದಿಗಳ ಗುಣಾಕಾರಗಳನ್ನು ಹೇಳಿರಿ. ಸಾಧ್ಯವಾದಷ್ಟು ಉದಾಹರಣೆಗಳನ್ನು ಬಾಯಿಯಿಂದ ಬಿಡಿಸಿರಿ.

೧. $ಯ+೫, ಯ+೮, ಯ+೩.$  ೨. $ಲ-೭, ಲ+೩, ಲ-೬.$

೩. ವ − ೮, ವ − ೧೦, ವ − ೩. ೪. ೫ − ಮ, ೭ − ಮ, ೧೦ − ಮ.

೫. ೫ − ೩ಕ, ೫ − ೨ಕ, ೫ + ೬ಕ. ೬. ೨ಕ + ೫, ೨ಕ + ೭, ೨ಕ + ೩.

೭. ೮ರ + ೧, ೮ರ − ೫, ೮ರ + ೩. ೮. ೩ರ + ೨ಕ, ೩ರ − ೫ತ, ೩ರ + ೭ಕ.

೯. ೫ಯ − ೨ಕ, ೫ಯ − ಕ, ೫ಯ − ೪ಕ.

೧೦. ಕ + ೩ಪ, ೨ಕ + ೩ಪ, ೭ಕ + ೩ಪ.

ಕೆಳಗಿನ ರಾಶಿಗಳಿಗೆ ಸರಳರೂಪವನ್ನು ಕೊಡಿರಿ.

೧೧. (ಯ − ೫)(ಯ + ೮)(ಯ − ೧೦) − (ಯ + ೮)$^{೨}$(ಯ − ೨).

೧೨. (ರ − ೬)(ರ + ೭)(ರ + ೨) − (ರ + ೨)$^{೨}$(ರ − ೫).

೧೩. (ವ + ೧೧)(ವ − ೨)(ವ + ೫) − (ವ + ೫)$^{೨}$(ವ + ೪).

೧೪. (೨ಸ − ೩)(೨ಸ − ೫)(೨ಸ − ೯) − (೨ಸ − ೫)$^{೩}$.

೧೫. (೩ಸ − ೧)(೩ಸ − ೨)(೩ಸ − ೫) − (೩ಸ + ೧)(೩ಸ − ೨)(೩ಸ − ೪)
ಇದಕ್ಕೆ ಸ − ೧ ರಿಂದ ಭಾಗಿಸಿರಿ.

೧೬. (೫ಸ + ೩)(೫ಸ − ೧)(೫ಸ − ೨) − (೫ಸ − ೧)$^{೨}$(೫ಸ − ೪) ಇದಕ್ಕೆ
೩ಸ − ೧ ರಿಂದ ಭಾಗಿಸಿರಿ.

# ಎರಡನೆಯ ಪ್ರಕರಣ

## ಗುಣಪೃಥಕ್ಕರಣ (ಮುಂದೆ ಸಾಗಿದುದು)

### ೧.

$$ಪ^{೨}-ಮ^{೨} \equiv (ಪ+ಮ)(ಪ-ಮ)$$

೨·೧. **ಎರಡು ಪದಗಳ ವರ್ಗಗಳೊಳಗಿನ ಅಂತರದಲ್ಲಿ ಆ ಎರಡು ಪದಗಳ ಬೇರೀಜು ಮತ್ತು ಆ ಎರಡು ಪದಗಳೊಳಗಿನ ಅಂತರ, ಹೀಗೆ ಎರಡು ಅವಯವಗಳು ದೊರೆಯುತ್ತವೆಂದು** ನಾವು ಹಿಂದೆ (ಭಾ. ೨, ಪು ೧೧೪, ೧೧೯) ನೋಡಿದ್ದೇವೆ. ಯಾವದಾದರೊಂದು ರಾಶಿಯನ್ನು ಎರಡು ವರ್ಗಗಳ ಅಂತರದ ಸ್ವರೂಪದಲ್ಲಿ ನಮಗೆ ಬರೆಯಲು ಬಂದರೆ ಗುಣಪೃಥಕ್ಕರಣಕ್ಕಾಗಿ ಅಲ್ಲಿ ಈ ಸೂತ್ರವನ್ನು ಹೇಗೆ ಉಪಯೋಗಿಸಬೇಕೆಂಬುದನ್ನಾದರೂ ನಾವು ನೋಡಿದ್ದೇವೆ. (ಭಾ. ೨, ಪು. ೧೩೧). ಇಂದು ಈಗ ಇದೇ ಸೂತ್ರವನ್ನುಪಯೋಗಿಸಿ ಮುಂದೆ ಕೆಲವು ರಾಶಿಗಳ ಗುಣಪೃಥಕ್ಕರಣವನ್ನು ಹೇಗೆ ಮಾಡಿದೆ ಎಂಬುದನ್ನು ಅಭ್ಯಸಿಸುವಾ.

**ಉ** ೧ $೬೪ನ^{೪}+೧$. ಇಲ್ಲಿ $೬೪ನ^{೪}$ ಇದು $೮ನ^{೨}$ ದ ವರ್ಗವಿದ್ದು $೮ನ^{೨}$ ಮತ್ತು ೧ ಇವುಗಳ ಗುಣಾಕಾರದ ಇಮ್ಮಡಿಯನ್ನು ($೧೬ನ^{೨}$) ಮೂಲ ರಾಶಿಯಲ್ಲಿ ಕೂಡಿಸಿದರೆ ಬೇರಿಜು ಪೂರ್ಣ ವರ್ಗವಾಗುವದು. ಆದುದರಿಂದ ಕೊಟ್ಟ ರಾಶಿಯನ್ನು ಗುಣಪೃಥಕ್ಕರಣಕ್ಕಾಗಿ ಮುಂದಿನಂತೆ ಮಂಡಿಸಲು ಬರುವದು.

$$
\begin{aligned}
೬೪ನ^{೪}+೧ &= ೬೪ನ^{೪}+೧೬ನ^{೨}+೧-೧೬ನ^{೨} \\
&= (೮ನ^{೨}+೧)^{೨}-(೪ನ)^{೨} \\
&= (೮ನ^{೨}+೪ನ+೧)(೮ನ^{೨}-೪ನ+೧).
\end{aligned}
$$

**ಉ**. ೨.
$$
\begin{aligned}
ಯ^{೪}+೨ಯ^{೨}+೯ &= ಯ^{೪}+೬ಯ^{೨}+೯-೪ಯ^{೨} \\
&= (ಯ^{೨}+೩)^{೨}-(೨ಯ)^{೨} \\
&= (ಯ^{೨}+೨ಯ+೩)(ಯ^{೨}-೨ಯ+೩).
\end{aligned}
$$

**ಉ**. ೩.
$$
\begin{aligned}
& ೪ಪ^{೨}-೯ಬ^{೨}+೩೦ಬಮ-೨೫ಮ^{೨} \\
&= ೪ಪ^{೨}-(೯ಬ^{೨}-೩೦ಬಮ+೨೫ಮ^{೨}) \\
&= (೨ಪ)^{೨}-(೩ಬ-೫ಮ)^{೨}
\end{aligned}
$$

= (೨ಪ + ೩ಬ − ೫ಮ)(೨ಪ − ೩ಬ + ೫ಮ).

**ಉ. ೪.** ೨(ಬಮ − ಪಭ) + ಪ$^{೨}$ − ಬ$^{೨}$ + ಭ$^{೨}$ − ಮ$^{೨}$

= ಪ$^{೨}$ − ೨ಪಭ + ಭ$^{೨}$ − ಬ$^{೨}$ + ೨ಬಮ − ಮ$^{೨}$.

= (ಪ$^{೨}$ − ೨ಪಭ + ಭ$^{೨}$) − (ಬ$^{೨}$ − ೨ಬಮ + ಮ$^{೨}$)

= (ಪ − ಭ)$^{೨}$ − (ಬ − ಮ)$^{೨}$

= {(ಪ − ಭ) + (ಬ − ಮ)} {(ಪ − ಭ) − (ಬ − ಮ)}

= (ಪ + ಬ − ಭ − ಮ)(ಪ − ಬ − ಭ + ಮ)

**ಉ. ೫.** ೯ಯ$^{೪}$ + ೧೫ಯ$^{೨}$ವ$^{೨}$ + ೧೬ವ$^{೪}$

= ೯ಯ$^{೪}$ + ೨೪ಯ$^{೨}$ವ$^{೨}$ + ೧೬ವ$^{೪}$ − ೯ಯ$^{೨}$ವ$^{೨}$

= (೩ಯ$^{೨}$ + ೪ವ$^{೨}$)$^{೨}$ − (೩ಯವ)$^{೨}$

= (೩ಯ$^{೨}$ + ೩ಯವ + ೪ವ$^{೨}$)(೩ಯ$^{೨}$ − ೩ಯವ + ೪ವ$^{೨}$).

**ಉ. ೬.** ೧೫ಪ$^{೨}$ − ಬ$^{೨}$ − ಮ$^{೨}$ + ೨ಪಬ + ೨ಬಮ − ೨ಮಪ

= ೧೬ಪ$^{೨}$ − (ಪ$^{೨}$ + ಬ$^{೨}$ + ಮ$^{೨}$ − ೨ಪಬ − ೨ಬಮ + ೨ಮಪ)

= (೪ಪ)$^{೨}$ − (ಪ − ಬ + ಮ)$^{೨}$

= {೪ಪ + (ಪ − ಬ + ಮ)} {೪ಪ − (ಪ − ಬ + ಮ)}

= (೫ಪ − ಬ + ಮ)(೩ಪ + ಬ − ಮ).

**ಉ. ೭.** (ಅ$^{೨}$ − ಕ$^{೨}$)(ಯ$^{೨}$ − ರ$^{೨}$) − ೪ಅಕಯರ

= ಅ$^{೨}$ಯ$^{೨}$ − ಅ$^{೨}$ರ$^{೨}$ − ಕ$^{೨}$ಯ$^{೨}$ + ಕ$^{೨}$ರ$^{೨}$ − ೪ಅಕಯರ

= (ಅ$^{೨}$ಯ$^{೨}$ − ೨ಅಕಯರ + ಕ$^{೨}$ರ$^{೨}$) −
(ಕ$^{೨}$ಯ$^{೨}$ + ೨ಅಕಯರ + ಅ$^{೨}$ರ$^{೨}$)

= (ಅಯ − ಕರ)$^{೨}$ − (ಕಯ + ಅರ)$^{೨}$

= (ಅಯ − ಕರ + ಕಯ + ಅರ)(ಅಯ − ಕರ − ಕಯ − ಅರ)

= {(ಅ + ಕ)ಯ + (ಅ − ಕ)ರ} {(ಅ − ಕ)ಯ − (ಅ + ಕ)ರ}.

**ಉ. ೮.** ೪ಯ$^{೨}$ − ೨೦ಯ − ೨೪ + ೪೨ರ − ೯ರ$^{೨}$. ಇಲ್ಲಿ ೪ಯ$^{೨}$ − ೨೦ಯ ಈ ಜೋಡಿಗೆ ೫$^{೨}$ ಅಂದರೆ ೨೫ ಇದ್ದರೆ ಅದು (೪ಯ$^{೨}$ − ೨೦ಯ + ೨೫) ಒಂದು ಪೂರ್ಣ ವರ್ಗವಾಗುತ್ತದೆಂದು ಕಂಡು ಬರುವದು. ಇದರ ಮೇಲಿಂದ ಕೊಟ್ಟ ರಾಶಿಯ ಪುನರ್ರಚನೆಯನ್ನು ಮುಂದಿನಂತೆ ಮಾಡಲು ಬರುವದು:

ರಾಶಿಯು $= ೪ಯ^{೨} - ೨೦ಯ + ೨೫ - ೪೯ + ೪೨ರ - ೯ರ^{೨}$

$$= (೪ಯ^{೨} - ೨೦ಯ + ೨೫) - (೪೯ - ೪೨ರ + ೯ರ^{೨})$$

$$= (೨ಯ - ೫)^{೨} - (೭ - ೩ರ)^{೨}$$

$$= \{(೨ಯ - ೫) + (೭ - ೩ರ)\} \{(೨ಯ - ೫) - (೭ - ೩ರ)\}$$

$$= (೨ಯ - ೩ರ + ೨) (೨ಯ + ೩ರ - ೧೨).$$

**೨·೨.** $ಪ^{೨} - ಮ^{೨} \equiv (ಪ + ಮ) (ಪ - ಮ)$ ಈ ಸೂತ್ರದ ಉಪಯೋಗವನ್ನು ಮಾಡಿ $ಯ^{೨} + ಕಯ + ಗ$ ಇಲ್ಲವೆ $ಆಯ^{೨} + ಕಯ + ಗ$ ದಂಥ ವರ್ಗತ್ರಿಪದಿಯ ಗುಣಪೃಥಕ್ಕರಣವನ್ನು ಹೇಗೆ ಮಾಡಲು ಬರುತ್ತದೆಂಬುದನ್ನು ಹಿಂದೆ (ಭಾ. ೨, ಪು. ೧೫೮-೧೬೧) ನಾವು ನೋಡಿದ್ದೇವೆ. ಅದರ ಸ್ವಲ್ಪ ಪುನರಾವಲೋಕನೆಯನ್ನು ಇಲ್ಲಿ ಮಾಡುವಾ.

ವರ್ಗಪದದ ಸಹಗುಣಕವು ೧ ಇರುವ $ಯ^{೨} - ೫ಯ - ೩೩೬$ ದಂಥ ವರ್ಗತ್ರಿಪದಿಯ ಗುಣಪೃಥಕ್ಕರಣವನ್ನು ವರ್ಗಾಂತರ ಸೂತ್ರದ ಸಹಾಯದಿಂದ ಮಾಡುವದಿದ್ದರೆ ನಾವು ಏನು ಮಾಡುತ್ತೇವೆ? $ಯ^{೨} - ೫ಯ$ ದ ಜೊತೆಗೆ $\frac{೫}{೨}$ ದ ವರ್ಗ ಅಂದರೆ $\frac{೨೫}{೪}$ ಇದ್ದರೆ $ಯ^{೨} - ೫ಯ + \frac{೨೫}{೪}$ ಇದು ಪೂರ್ಣ ವರ್ಗವಾಗುವದೆಂಬ ಸಂಗತಿಯನ್ನು ಲಕ್ಷ್ಯದಲ್ಲಿಟ್ಟು ರಾಶಿಯನ್ನು ಹೊಸ ರೀತಿಯಲ್ಲಿ ಕೆಳಗಿನಂತೆ ಮಂಡಿಸುವೆವು.

**ಉ. ೯.** $ಯ^{೨} - ೫ಯ - ೩೩೬$

$$= ಯ^{೨} - ೫ಯ + \frac{೨೫}{೪} - \frac{೧೩೬೯}{೪}$$

$$= \left(ಯ - \frac{೫}{೨}\right)^{೨} - \left(\frac{೩೭}{೨}\right)^{೨}$$

$$= \left(ಯ - \frac{೫}{೨} - \frac{೩೭}{೨}\right) \left(ಯ - \frac{೫}{೨} - \frac{೩೭}{೨}\right)$$

$$= (ಯ + ೧೬) (ಯ - ೨೧).$$

**ಉ. ೧೦.** $೩೫ಯ^{೨} + ೪೬ಯ - ೨೪$

$$= ೩೫\left(ಯ^{೨} + \frac{೪೬}{೩೫}ಯ - \frac{೨೪}{೩೫}\right)$$

$$= ೩೫ \left\{ ಯ^{೨} + \frac{೪೬}{೩೫}ಯ + \left(\frac{೨೩}{೩೫}\right)^{೨} + \left(\frac{೨೩}{೩೫}\right)^{೨} - \frac{೨೪}{೩೫} \right\}$$

$$= ೩೫ \left\{ ಯ^{೨} + \frac{೪೬}{೩೫}ಯ + \left(\frac{೨೩}{೩೫}\right)^{೨} + \frac{೧೩೬೯}{೩೫ \times ೩೫} \right\}$$

$$= ೩೫ \left\{ \left(ಯ + \frac{೨೩}{೩೫}\right)^{೨} - \left(\frac{೩೭}{೩೫}\right)^{೨} \right\}$$

$$= ೩೫\left( ಯ + \frac{೨೩}{೩೫} + \frac{೩೭}{೩೫}\right)\left( ಯ + \frac{೨೩}{೩೫} - \frac{೩೭}{೩೫}\right)$$

$$= ೭ \times ೫\left( ಯ + \frac{೧೨}{೭}\right)\left( ಯ - \frac{೨}{೫}\right)$$

$$= (೭ಯ + ೧೨)(೫ಯ - ೨).$$

ಇಲ್ಲಿ ಮತ್ತು ಮೇಲಿರುವ $ಯ^{೨} - ೨ಕಯ$ ಮತ್ತು ಅದರಂತೆಯೇ $ಯ^{೨} + ೨ಕಯ$ ಇವುಗಳಲ್ಲಿ $ಕ^{೨}$ವನ್ನು ಕೂಡಿಸಿದರೆ ಜೋಡು ಪೂರ್ಣ ವರ್ಗವಾಗುವದೆಂಬ ಸಂಗತಿಯ ಉಪಯೋಗವನ್ನು ಮಾಡಿದೆ.

ಇದರಂತೆಯೇ ವರ್ಗಾಂತರಸೂತ್ರದ ಉಪಯೋಗವನ್ನು ಮಾಡಿ **$ಅಯ^{೨} + ಕಯ + ಗ$** ದಂಥ ವರ್ಗ ತ್ರಿಪದಿಯ ಗುಣ ಪೃಥಕ್ಕರಣವನ್ನು ಮಾಡಲು ಬರುವದು. ಸಹಜವಾಗಿಯೇ ಇದಕ್ಕಿಂತಲೂ ಸುಲಭವಾದ ಮತ್ತು ಶೀಘ್ರವಾದ ರೀತಿಯು ನೆನಪಿಗೆ ಬಾರದಿದ್ದಾಗ ಮಾತ್ರ ಈ ರೀತಿಯನ್ನು ಉಪಯೋಗಿಸಬೇಕು.

## ಪ್ರಶ್ನ ಸಂಗ್ರಹ ೯.

ಗುಣ ಪೃಥಕ್ಕರಣವನ್ನು ಮಾಡಿರಿ.

೧. $ಬ^{೨} - ೧೮ಬ + ೮೧ - ೯ಮ^{೨}$.   ೨. $೪ಱ^{೨} + ೨೮ಱ + ೪೯ - ೨೫ಕ^{೨}$.

೩. $೨೫ಱ^{೨} - ೨೦ಱಕ + ೪ಕ^{೨} - ೪ಗ^{೨} + ೪ಗಘ - ಘ^{೨}$.

೪. $ಱ^{೪} + ೪ಕ^{೪}$.   ೫. $೮೧ಪ^{೪} + ೬೪ಮ^{೪}$.

೬. $೩೨೪ರ^{೪} + ೬೨೫ಸ^{೪}$.   ೭. $ಯ^{೪} - ೩ಯ^{೨} + ೧$.

೮. $ಪ^{೪} - ೧೧ಪಮ + ಮ^{೪}$.   ೯. $೯ಯ^{೪} - ೧೩ಯ^{೨}ರ^{೨} - ೪ರ^{೨}$.

೧೦. $೬೪ಮ^{೪} + ೨೩ಮ^{೨}ಯ^{೨} + ೯ಯ^{೪}$.

೧೧. ೮೧ಪ$^{೪}$ − ೪೦ಪ$^{೨}$ಮ$^{೨}$ + ೪ಮ$^{೪}$.

೧೨. ೪ಯ$^{೨}$ + ೨೦ಯ + ೧೬ − ೨೪ರ − ೧೬ರ$^{೨}$.

೧೩. ೨೫ನ$^{೨}$ − ೯ಮ$^{೨}$ − ೨೦ನ + ೬ಮ + ೩.

೧೪. ೪ರ$^{೨}$ − ಸ$^{೨}$ − ೧೨ರ − ೧೦ಸ − ೧೬.

೧೫. ಯ$^{೨}$ + ರ$^{೨}$ − ಲ$^{೨}$ − ಪ$^{೨}$ + ೨ಯರ + ೨ಲಪ.

೧೬. ೪ತ$^{೨}$ + ೨೫ದ$^{೨}$ − ೯ನ$^{೨}$ − ೨೦ತದ + ೨೪ನ − ೧೬.

೧೭. ೨೫ಚ$^{೨}$ − ೫ಕ$^{೨}$ − ೧೬ಗ$^{೨}$ + ೨೦ಚಕ + ೨೪ಕಗ.

೮೧. ೮ಪ$^{೨}$ಬ$^{೨}$ + ೨ಬ$^{೨}$ಮ$^{೨}$ + ೮ಮ$^{೨}$ಪ$^{೨}$ − ೧೬ಪ$^{೪}$ − ಬ$^{೪}$ − ಮ.

೧೯. ೧೬ಯ$^{೨}$ − ೪ರ$^{೨}$ − ಲ$^{೨}$ + ೧೨ಯರ + ೪ರಲ − ೬ಲಯ.

೨೦. ೧೬ಯ$^{೨}$ + ೬೪ಯ + ೬೩.

೨೧. ೨೧ಪ$^{೨}$ − ೭೧ಪ − ೨೨.

೨೨. ೮೦ಜ$^{೨}$ಕ$^{೨}$ − ೩೨ಜ$^{೪}$ − ೧೮ಕ$^{೪}$.

೨೩. ೭೨(೨ಯ − ೩ರ)$^{೨}$ − ೪ಯ + ೬ರ.

೨೪. ೬೪ಜ$^{೪}$ + ೪೮ಜ$^{೨}$ − ೪ಜ − ೩.

೨೫. ೪ನ$^{೪}$ − ೩ನ + ೧.

೨.

**ಪ$^{೩}$ ± ಮ$^{೩}$ ≡ (ಪ ± ಮ) (ಪ$^{೨}$ ± ಪಮ + ಮ$^{೨}$)**

೨೬. ಹಿಂದೆ (ಭಾಗ ೧ ಪು. ೧೨೩) **ಎರಡು ಸಂಖ್ಯೆಗಳ ಘನಗಳ ಬೇರೀಜು = ಆ ಸಂಖ್ಯೆಗಳ ಬೇರೀಜು × (ಆ ಸಂಖ್ಯೆಗಳ ವರ್ಗಗಳ ಬೇರೀಜು − ಆ ಸಂಖ್ಯೆಗಳ ಗುಣಾಕಾರ)** ಮತ್ತು **ಎರಡು ಸಂಖ್ಯೆಗಳ ಘನಗಳೊಳಗಿನ ಅಂತರ = ಆ ಸಂಖ್ಯೆಗಳೊಳಗಿನ ಅಂತರ × (ಆ ಸಂಖ್ಯೆಗಳ ವರ್ಗಗಳ ಬೇರೀಜು + ಆ ಸಂಖ್ಯೆಗಳ ಗುಣಾಕಾರ)** ಎಂದು ನೋಡಿದ್ದೇವೆ. ಮತ್ತು ಈ ನಿಯಮದ ಉಪಯೋಗವನ್ನು ಮಾಡಿ ಕೆಲವು ರಾಶಿಗಳ ಅವಯವಗಳನ್ನು ತೆಗೆದಿದ್ದೇವೆ. ಇಂದು ಅದೇ ಸೂತ್ರವನ್ನು ಅಂಥವೇ ಇನ್ನೂ ಕೆಲವು ರಾಶಿಗಳ ಅವಯವಗಳನ್ನು ತೆಗೆಯಲು ಉಪಯೋಗಿಸುವಾ.

**ಉ. ೧.** ಯ$^{೩}$ + ೯ಯ$^{೨}$ + ೨೭ಯ + ೯೧. ಇಲ್ಲಿ ಯ$^{೩}$ + ೯ಯ$^{೨}$ + ೨೭ಯ ದ ಜೊತೆಗೆ ೨೭ನ್ನು ತೆಗೆದುಕೊಂಡರೆ ಅದು ಯ + ೩ ಇದರ ಘನವಾಗುವದೆಂದು ಕಂಡು ಬರುವದು. ಆದುದರಿಂದ

ಯ$^3$ + ೯ಯ$^2$ + ೨೭ಯ + ೯೧

= ಯ$^3$ + ೯ಯ$^2$ + ೨೭ಯ + ೨೭ + ೬೪

= (ಯ + ೩)$^3$ + (೪)$^3$

= (ಯ + ೩ + ೪){(ಯ + ೩)$^2$ − ೪(ಯ + ೩) + ೧೬}

= (ಯ + ೭)(ಯ$^2$ + ೬ಯ + ೯ − ೪ಯ − ೧೨ + ೧೬)

= (ಯ + ೭)(ಯ$^2$ + ೨ಯ + ೧೩).

ಉ. ೨. ೭ಪ$^3$ + ೬ಪ$^2$ಮ − ೧೨ಪಮ$^2$ + ೮ಮ$^3$

= ೮ಪ$^3$ − ಪ$^3$ + ೬ಪ$^2$ಮ − ೧೨ಪಮ$^2$ + ೮ಮ$^3$

= ೮ಪ$^3$ − (ಪ$^3$ − ೬ಪ$^2$ಮ + ೧೨ಪಮ$^2$ − ೮ಮ$^3$)

= (೨ಪ$^3$) − (ಪ − ೨ಮ)$^3$

= {(೨ಪ − (ಪ − ೨ಮ)} {೪ಪ$^2$ + ೨ಪ(ಪ − ೨ಮ) +
(ಪ − ೨ಮ)$^2$}

= (೨ಪ − ಪ + ೨ಮ)
(೪ಪ$^2$ + ೨ಪ$^2$ − ೪ಪಮ + ಪ$^2$ − ೪ಪಮ + ೪ಮ$^2$)

= (ಪ + ೨ಮ)(೭ಪ$^2$ − ೮ಪಮ + ೪ಮ$^2$).

ಉ. ೩. ೨೭ನ$^3$ − ೧೫ನ − ೨. ಇಲ್ಲಿ −೨ ಈ ಸಂಖ್ಯೆಯನ್ನು
+೮ − ೧೦ ಹೀಗೆ ಬರೆದರೆ ೨೭ನ$^3$ − ೧೫ನ − ೨

= ೨೭ನ$^3$ + ೮ − ೧೫ನ − ೧೦

= (೩ನ + ೨)(೯ನ$^2$ − ೬ನ + ೪) − ೫(೩ನ + ೨)

= (೩ನ + ೨)(೯ನ$^2$ − ೬ನ + ೪ − ೫)

= (೩ನ + ೨)(೯ನ$^2$ − ೬ನ − ೧).

ಉ. ೪. ೮ಯ$^3$ + ೮ಅಯ$^2$ − ೩ಅ$^3$.

−೩ಅ$^3$ ದ −ಅ$^3$ ಮತ್ತು −೨ಅ$^3$ ಹೀಗೆ ಭಾಗಗಳನ್ನು ಮಾಡಿದರೆ
೮ಯ$^3$ + ೮ಅಯ$^2$ − ೩ಅ$^3$ = ೮ಯ$^3$ − ಅ$^3$ + ೮ಅಯ$^2$ − ೨ಅ$^3$

= (೨ಯ − ಅ)(೪ಯ$^2$ + ೨ಅಯ + ಅ$^2$) + ೨ಅ(೪ಯ$^2$ − ಅ$^2$)

= (೨ಯ − ಅ)(೪ಯ$^2$ + ೨ಅಯ + ಅ$^2$) + ೨ಅ(೨ಯ − ಅ)(೨ಯ + ಅ)

= (೨ಯ − ಅ)(೪ಯ$^2$ + ೨ಅಯ + ಅ$^2$ + ೪ಅಯ + ೨ಅ$^2$)

= (೨ಯ − ೩ಅ)(೪ಯ$^{೨}$ + ೬ಅಯ + ೯ಅ$^{೨}$).

ಉ. ೫. ಅ$^{೪}$ − ೬ಅ − ೪. −೬ಅ ದ − ೮ಅ ಮತ್ತು +೨ಅ ಹೀಗೆ ಭಾಗಗಳನ್ನು ಮಾಡಿ ಅ$^{೪}$ − ೬ಅ − ೪ = ಅ$^{೪}$ − ೮ಅ + ೨ಅ − ೪

= ಅ(ಅ$^{೩}$ − ೮) + ೨(ಅ − ೨)

= ಅ(ಅ − ೨)(ಅ$^{೨}$ + ೨ಅ + ೪) + ೨(ಅ − ೨)

= (ಅ − ೨){ಅ(ಅ$^{೨}$ + ೨ಅ + ೪) + ೨}

= (ಅ − ೨)(ಅ$^{೩}$ + ೨ಅ$^{೨}$ + ೪ಅ + ೨).

ಉ. ೬. ಯ$^{೩}$ + ೪ಯ$^{೨}$ − ೧೭ಯ − ೬೦. −೬೦ ಇದರ −೬೪ ಮತ್ತು +೪ ಹೀಗೆ ಭಾಗಗಳನ್ನು ಮಾಡಿ

ಯ$^{೩}$ + ೪ಯ$^{೨}$ − ೧೭ಯ − ೬೦ = ಯ$^{೩}$ − ೬೪ + ೪ಯ$^{೨}$ − ೧೭ಯ + ೪

= (ಯ − ೪)(ಯ$^{೨}$ + ೪ಯ + ೧೬) + (ಯ − ೪)(೪ಯ − ೧)

= (ಯ − ೪)(ಯ$^{೨}$ + ೪ಯ + ೧೬ + ೪ಯ − ೧)

= (ಯ − ೪)(ಯ$^{೨}$ − ೮ಯ + ೧೫)

= (ಯ − ೪)(ಯ + ೩)(ಯ + ೫).

## ಪ್ರಶ್ನ ಸಂಗ್ರಹ ೧೦.

ಗುಣ ಪೃಥಕ್ಕರಣವನ್ನು ಮಾಡಿರಿ.

೧. ೧೨೫ಕ$^{೩}$ − ೭೫ಕ$^{೨}$ − ೩೦ಕ + ೮.

೨. ೮ − ೫೨ವ + ೭೮ವ$^{೨}$ − ೨೭ವ$^{೩}$.

೩. ಕ$^{೩}$ − ೩ಕ$^{೨}$ − ೧೦ಕ + ೨೪. ೪. ನ$^{೩}$ − ೧೪ನ$^{೨}$ + ೬೩ನ − ೯.

೫. ೬೪ಯ$^{೩}$ + ೮೦ಯ$^{೨}$ − ೬೮ಯ − ೨೧.

೬. ೨೪ರ$^{೩}$ − ೨೬ರ$^{೨}$ + ೯ರ − ೧. ೭. ರ$^{೩}$ − ೪೮ರ + ೧೨೮.

೮. ೨೭ಅ$^{೩}$ − ೩೬ಅ + ೧೬. ೯. ಮ$^{೩}$ + ೧೩ಮ$^{೨}$ − ೧೪೪.

೧೦. ಅ$^{೩}$ − ೯ಅ$^{೨}$ + ೧೦೮. ೧೧. ೮ಸ$^{೩}$ + ೮ಸ$^{೨}$ + ೯.

೧೨. ೨೭ನ$^{೩}$ + ೫೪ನ$^{೨}$ − ೩೨. ೧೩. (ಅ + ಕ)$^{೩}$ − (ಅ − ಕ)$^{೩}$

೧೪. (೨ಅ − ಕ)$^{೩}$ − (ಅ − ೨ಕ)$^{೩}$. ೧೫. (೩ದ − ನ)$^{೩}$ + ೨೭(ದ + ನ)$^{೩}$.

೧೬. ಯ$^{೩}$ + ೨ರ$^{೩}$ + (೨ಯ + ರ)$^{೩}$ ೧೭. ೬೪ಶ$^{೬}$ − ೭೨೯ಚ$^{೬}$.

೧೮. ಅ$^{೧೨}$ − ಕ$^{೧೨}$. ೧೯. ೩೪೩ಸ$^{೬}$ಮ$^{೩}$ − ೬೪ಸ$^{೩}$ಮ$^{೯}$.

೨೦. $\text{೫೧೨ಅ}^{೩}—\text{೧೨೫ಕ}^{೬}$.  ೨೧. $(\text{ಪ}+\text{೩})^{೬}—\text{೭೨೯}$.

೨೨. $(\text{ನ}^{೩}—\text{೧})^{೨}—(\text{ನ}—\text{೧})^{೨}$.

೨೩. ಪ=೨·೮, ಮ=—೬ ಇದ್ದರೆ $(\text{೩ಪ}—\text{೫ಮ})^{೩}+(\text{೨ಪ}+\text{೭ಮ})^{೩}=?$

೨೪. ಅ=೫.೨, ಕ=೮.೩೫, ಗ= —೫.೨ ಇದ್ದರೆ $(\text{ಅ}+\text{೨ಕ})^{೩}$
$—(\text{೨ಕ}—\text{ಗ})^{೩}=?$

೩-

## (ಯ+ಪ)(ಯ+ಬ)(ಯ+ಭ)(ಯ+ಮ)+ಕ.

೬೮. ಮೊದಲನೆಯ ಪದವು ಒಂದೇ ಇರುವಂಥ ನಾಲ್ಕು ದ್ವಿಪದಿಗಳ ಗುಣಾಕಾರದಲ್ಲಿ ಒಂದು ಸಂಖ್ಯೆಯನ್ನು ಕೂಡಿಸಿ ಸಿದ್ಧವಾದ ರಾಶಿಯ ಗುಣ-ಪೃಥಕ್ಕರಣವನ್ನು ಹಲವು ಸಾರೆ ಹೇಗೆ ಮಾಡಲು ಬರುತ್ತದೆಂಬುದನ್ನು ಮುಂದಿನ ಉದಾಹರಣೆಗಳಲ್ಲಿ ತೋರಿಸಿದೆ.

**ಉ. ೧.** (ಯ+೧)(ಯ+೨)(ಯ+೪)(ಯ+೫)+೨. ಇಲ್ಲಿ (ಯ+೧) ಮತ್ತು (ಯ+೫) ಇವೆರಡರ ಮತ್ತು (ಯ+೨) ಮತ್ತು (ಯ+೪) ಇವುಗಳ ಗುಣಾಕಾರವನ್ನು ಮಾಡಿದರೆ ಎರಡೂ ಗುಣಾಕಾರಗಳಲ್ಲಿ ಮೊದಲಿನ ಎರಡು ಪದಗಳು ಅವೇ ಅಂದರೆ $\text{ಯ}^{೨}+\text{೬ಯ}$ ಬರುವವು. ಮತ್ತು $\text{ಯ}^{೨}+\text{೬ಯ}$ ದ ನಿರ್ದೇಶವನ್ನು ಅ ಈ ಆದೇಶದಿಂದ ಮಾಡಿದರೆ ಕೊಟ್ಟ ರಾಶಿಯನ್ನು ಮುಂದಿನಂತೆ ಬರೆಯಲು ಬರುವದು ಮತ್ತು ಅದರ ಗುಣಪೃಥಕ್ಕ-ರಣವನ್ನು ಬಹಳ ಸುಲಭ ರೀತಿಯಿಂದ ಮಾಡಲು ಬರುವದು.

$$(\text{ಯ}+\text{೧})(\text{ಯ}+\text{೨})(\text{ಯ}+\text{೪})(\text{ಯ}+\text{೫})+\text{೨}$$
$$=\{(\text{ಯ}+\text{೧})(\text{ಯ}+\text{೫})\}\ \{(\text{ಯ}+\text{೨})(\text{ಯ}+\text{೪})\}+\text{೨}$$
$$=(\text{ಯ}^{೨}+\text{೬ಯ}+\text{೫})(\text{ಯ}^{೨}+\text{೬ಯ}+\text{೮})+\text{೨}$$
$$=(\text{ಅ}—\text{೫})(\text{ಅ}+\text{೮})+\text{೨}$$
$$=\text{ಅ}^{೨}+\text{೧೩ಅ}+\text{೪೨}$$
$$=(\text{ಅ}+\text{೬})(\text{ಅ}+\text{೭})$$
$$=(\text{ಯ}^{೨}+\text{೬ಯ}+\text{೬})(\text{ಯ}^{೨}+\text{೬ಯ}+\text{೭})$$

$[\therefore \text{ಅ}=\text{ಯ}^{೨}+\text{೬ಯ}$

**ಉ. ೨.** (ರ−೭)(ರ−೫)(ರ−೧)(ರ+೩)+೧೫. ಇಲ್ಲಿ ರ−೭ ಮತ್ತು ರ+೩ ಹಾಗೂ (ರ−೫) ಮತ್ತು ರ+೧ ಇವುಗಳ ಗುಣಾಕಾರದ ಶ್ರೇಣಿಯ ಮೊದಲಿನ ಎರಡು ಪದಗಳ ಗುಂಪು ರ$^{೨}$−೪ರ ಇರುತ್ತದೆ. ಆದುದರಿಂದ ರಾಶಿಯು

= {(ರ−೭)(ರ+೩)} {(ರ+೫)(ರ+೧)} +೧೫
= (ರ$^{೨}$−೪ರ−೨೧)(ರ$^{೨}$−೪ರ−೫)+೧೫
= (ಅ−೨೧)(ಅ−೫)+೧೫ [ರ−೪ರ ವನ್ನು ಅ ದಿಂದ ಆದೇಶಿಸಿ
= ಅ$^{೨}$−೨೬ಅ+೧೨೦
= (ಅ−೨೦)(ಅ−೬)
= (ರ$^{೨}$−೪ರ−೨೦)(ರ$^{೨}$−೪ರ−೬) [∵ ಅ=ರ$^{೨}$−೪ರ

**ಉ. ೩.** (೩ನ−೫)(೩ನ−೨)(೩ನ+೧೦)(೩ನ+೭)−೩೭. ಇಲ್ಲಿ −೫+೧೦=೫, ಮತ್ತು −೨+೭=೫. ಆದುದರಿಂದ ಗುಣಾಕಾರಕ್ಕಾಗಿ ೩ನ−೫ ಮತ್ತು ೩ನ+೧೦ ಹಾಗೂ ೩ನ−೨ ಮತ್ತು ೩ನ+೭ ಹೀಗೆ ಜೋಡಿಗಳನ್ನು ತೆಗೆದುಕೊಂಡರೆ ರಾಶಿಯು

= {(೩ನ−೫)(೩ನ+೧೦)} {(೩ನ−೨)(೩ನ+೭)} −೩೭
= (೯ನ$^{೨}$+೧೫ನ−೫೦) (೯ನ$^{೨}$+೧೫ನ−೧೪)−೩೭
= (ಅ−೫೦)(ಅ−೧೪)−೩೭ [೯ನ+೧೫ನ ದ ಬದಲಾಗಿ ಅ ಇಟ್ಟು
= ಅ$^{೨}$−೬೪ಅ+೬೬೩
= (ಅ−೫೧)(ಅ−೧೩)
= (೯ನ$^{೨}$+೧೫ನ−೫೧)(೯$^{೨}$ನ−೧೫ನ−೧೩)
[∵ ಅ=೯ನ$^{೨}$+೧೫ನ
= ೩(೩ನ$^{೨}$−೫ನ−೧೭)(೯ನ$^{೨}$−೧೫ನ−೧೩).

ಮೇಲಿನ ಎಲ್ಲ ಉದಾಹರಣೆಗಳಲ್ಲಿ ಕಂಡು ಬರುವದೇನೆಂದರೆ ಯಾವ ಗುಣಾಕಾರಗಳ ಮೊದಲನೇ ಎರಡು ಪದಗಳು ಒಂದೇ ಇರುವವೋ ಅಂಥ ಜೋಡಿಗಳನ್ನು ಆರಿಸಲಾಗಿದೆ. ಮುಂದಿನ ಉದಾಹರಣೆಗಳಲ್ಲಿ ಗುಣಪೃಥಕ್ಕರಣಕ್ಕಾಗಿ ಇದೇ ತತ್ವವನ್ನು ಉಪಯೋಗಿಸಿದೆ.

ಉ. ೪. (ಯ+೫)(ಯ+೪)(೨ಯ—೩)(೨ಯ—೧)—೧೨.
ಎರಡೂ ಗುಣಾಕಾರಗಳಲ್ಲಿ ಯ$^{೨}$—ದ ಪದ ಮತ್ತು ಯ—ದ ಪದ ಇವು ಒಂದೇ ಇರುವಂಥ ಜೋಡಿಗಳನ್ನು ಗುಣಾಕಾರಕ್ಕಾಗಿ ನಾವು ಆರಿಸಿ ತೆಗೆಯಬೇಕಾಗಿದೆ. ಇಲ್ಲಿ ಅಂಥ ಜೋಡಿಗಳು ಯ+೫ ಮತ್ತು ೨ಯ—೩ ಹಾಗೂ ಯ+೪ ೨ಯ—೧. ಇವುಗಳ ಗುಣಾಕಾರಗಳಲ್ಲಿ ಮೊದಲನೇ ಎರಡು ಪದಗಳ ಬಂಧ ೨ಯ$^{೨}$—೭ಯ ಇರುವದು. ಆದುದರಿಂದ ಗುಣಪೃಥಕ್ಕರಣಕ್ಕಾಗಿ ರಾಶಿಯ ಪುನರ್ರಚನೆಯನ್ನು ಕೆಳಗಿನಂತೆ ಮಾಡಲು ಬರುವದು.

ರಾಶಿಯು = {(ಯ+೫)(೨ಯ—೩)} {(ಯ+೪)(೨ಯ—೧)} —೧೨

= (೨ಯ$^{೨}$+೭ಯ—೧೫)(೨ಯ$^{೨}$+೭ಯ—೪)—೧೨

= (ಅ—೧೫)(ಅ—೪)—೧೨ [೨ಯ$^{೨}$+೭ಯ ದ ಬದಲಾಗಿ ಅ ತೆಗೆದುಕೊಂಡು

= ಅ$^{೨}$—೧೯ಅ+೪೮

=(ಅ—೧೬)(ಅ—೩)

= (೨ಯ$^{೨}$+೭ಯ—೧೬)(೨ಯ$^{೨}$—೭ಯ—೩)

[∵ ಅ=೨ಯ$^{೨}$+೭ಯ

ಉ. ೫. ಯ (ಯ+೫ಕ)(ಯ—ಕ)(ಯ—೬ಕ)+೧೪೪ಕ$^{೪}$. ಇಲ್ಲಿ ಯ ಮತ್ತು ಯ—ಕ ಹಾಗೂ ಯ—೫ಕ ಮತ್ತು ಯ—೬ಕ ಹೀಗೆ ಜೋಡಿಗಳನ್ನು ತೆಗೆದುಕೊಂಡರೆ,

ರಾಶಿಯು={ಯ (ಯ—ಕ)} {(ಯ+೫ಕ)(ಯ—೬ಕ)} +೧೪೪ಕ$^{೪}$

= (ಯ$^{೨}$—ಕಯ)(ಯ$^{೨}$—ಕಯ—೩೦ಕ$^{೨}$)+೧೪೪ಕ$^{೪}$

= ಅ (ಅ—೩೦ಕ$^{೨}$)+೧೪೪ಕ$^{೪}$ [ಯ$^{೨}$—ಕಯ ದ ಬದಲಾಗಿ ಅ ಇಟ್ಟು,

= ಅ$^{೨}$—೩೦ಕ$^{೨}$ಅ+೧೪೪ಕ$^{೪}$

= (ಅ—೬ಕ$^{೨}$)(ಅ—೨೪ಕ$^{೨}$)

= (ಯ$^{೨}$—ಕಯ—೬ಕ$^{೨}$)(ಯ$^{೨}$—ಕಯ—೨೪ಕ$^{೨}$)

[∵ ಅ = ಯ$^{೨}$—ಕಯ

= (ಯ—೩ಕ)(ಯ+೨ಕ)(ಯ$^{೨}$—ಯಕ—೨೪ಕ$^{೨}$).

## ಪ್ರಶ್ನ ಸಂಗ್ರಹ ೧೧.

ಗುಣಪೃಥಕ್ಕರಣವನ್ನು ಮಾಡಿರಿ:

೧. (ಅ+೨)(ಅ+೬)(ಅ+೯)(ಅ+೫)+೨೦.

೨. (ವ—೩)(ವ—೪)(ವ—೨)(ವ—೬)—೩೬.

೩. (ಜ—೪)(ಜ—೨)(ಜ+೫)(ಜ+೭)+೮೦.

೪. ಪ(ಪ—೧)(ಪ+೫)(ಪ+೬)—೭೨.

೫. ಗ(ಗ+೧)(೩ಗ—೨)(೩ಗ—೫)+೪.

೬. (೪ಯ—೩)(೪ಯ—೧)(೪ಯ+೫)(೪ಯ+೭)+೫೫.

೭. ಯ(ಯ—೨ಸ)(ಯ+೪ಸ)(ಯ+೬ಸ)+೩೫ಸ$^4$.

೮. (೨ರ—೩ಸ)(೨ರ—ಸ)(೨ರ—೭ಸ)(೨ರ—೯ಸ)+೧೧ಸ$^4$.

೯. (೩ರ—೫ಕ)(೩ರ—೪ಕ)(೩ರ+ಕ)(೩ರ+೨ಕ)—೫೫ಕ$^4$.

**ಪ$^3$ + ಬ$^3$ + ಮ$^3$—೩ಪಬಮ=(ಪ+ಬ+ಮ)**
**(ಪ$^2$ + ಬ$^2$ + ಮ$^2$—ಪಬ—ಬಮ—ಮಪ)**

೪.

೨೫. **ಮೂರು ಸಂಖ್ಯೆಗಳ ಘನಗಳ ಬೇರೀಜು** ಉಣಾ ಅವೇ **ಮೂರು ಸಂಖ್ಯೆಗಳ ಗುಣಾಕಾರದ ಮುಮ್ಮಡಿ,** ಈ ಸ್ವರೂಪದ ರಾಶಿಯಿದ್ದರೆ ಅದರ ಗುಣಪೃಥಕ್ಕರಣವನ್ನು ಕೆಳಗಿನಂತೆ ಮಾಡಲು ಬರುವದು.

**ಪ$^3$ + ಬ$^3$ + ಮ$^3$ — ೩ಪಬಮ**

≡ (ಪ+ಬ)$^3$—೩ಪಬ(ಪ+ಬ)+ಮ$^3$—೩ಪಬಮ

≡ (ಪ+ಬ)$^3$+ಮ$^3$—೩ಪಬ(ಪ+ಬ)—೩ಪಬಮ

≡ (ಪ+ಬ+ಮ){(ಪ+ಬ)$^2$—ಮ(ಪ+ಬ)+ಮ$^2$}
—೩ಪಬ(ಪ+ಬ+ಮ)

≡ (ಪ+ಬ+ಮ)(ಪ$^2$+೨ಪಬ+ಬ$^2$—ಮಪ—ಬಮ+ಮ$^2$—೩ಪಬ)

≡ **(ಪ+ಬ+ಮ)(ಪ$^2$+ಬ$^2$+ಮ$^2$—ಪಬ—ಬಮ—ಮಪ)**

ಮೊದಲಿನೆಯ ಪಂಕ್ತಿಯಲ್ಲಿ ಪ$^3$ — ಬ$^3$ ಇವು ಎರಡು ಘನಗಳಿಂದಾದ ಒಂದು ಭಾಗವನ್ನು (ಘನಗಳ ಇದೇ ಜೋಡಿಯನ್ನು ತೆಗೆದುಕೊಳ್ಳಬೇಕೆಂಬಿಲ್ಲ. ಯಾವದಾದರೂ ತೆಗೆದುಕೊಂಡರೆ ಬರುವದು) (ಪ+ಬ)$^3$—೩ಪಬ(ಪ+ಬ)

ಈ ಸ್ವರೂಪದಲ್ಲಿ ಬರೆದಿದೆ ಮತ್ತು ಅದರ ಮೂಲಕ ಮೂಲರಾಶಿಯು ಈ ಬದಲಿಸಿದ ಸ್ವರೂಪದಲ್ಲಿ ಮೂರು ಘನಗಳ ಬದಲಾಗಿ ಎರಡು ಘನಗಳು ಕಂಡು ಬರುತ್ತವೆ. ಈಗ ಎರಡು ಘನಗಳ ಬೇರೀಜಿನ ಅವಯವಗಳನ್ನು ಒಮ್ಮೆಲೆ ತೆಗೆಯಲು ನಮಗೆ ಬರುತ್ತದೆ. ಮತ್ತು ಹಾಗೆ ಅವುಗಳನ್ನು ಮೂರನೇ ಪಂಕ್ತಿ-ನಲ್ಲಿ ಬರೆದಿದೆ. ಹೀಗೆ ಕ್ರಮದಿಂದ ಹೋದಂತೆ ಆ ರಾಶಿಯಲ್ಲಿ ಎರಡು ಅವಯವಗಳು ದೊರೆಯುತ್ತವೆ. ಒಂದು **ಆ ಮೂರು ಸಂಖ್ಯೆಗಳ ಬೇರೀಜು** ಮತ್ತು ಬೇರೊಂದು **ಆ ಮೂರು ಸಂಖ್ಯೆಗಳ ವರ್ಗಗಳ ಬೇರೀಜು ಉಣಾ ಆ ಮೂರು ಸಂಖ್ಯೆಗಳೊಳಗಿನ ಎರಡೆರಡರ ಗುಣಾಕಾರಗಳಿರುತ್ತ**-ವೆಂದು ಕಂಡುಬರುವದು.

ಮೇಲಿನ ಗುಣಪೃಥಕ್ಕರಣವನ್ನು ಸ್ವಲ್ಪ ಬೇರೆ ಸ್ವರೂಪದಲ್ಲಿ ಬರೆಯುವ-ದೆಂದರೆ:

$$ಪ^{೩}+ಬ^{೩}+ಮ^{೩}—೩ಪಬಮ$$

$$\equiv(ಪ+ಬ+ಮ)\,(ಪ^{೨}+ಬ^{೨}+ಮ^{೨}—ಪಬ—ಬಮ—ಬಮ)$$

$$\equiv\frac{೧}{೨}\,(ಪ+ಬ+ಮ)(೨ಪ^{೨}+೨ಬ^{೨}+೨ಮ^{೨}—೨ಪಬ—೨ಬಮ—೨ಮಪ)$$

$$\equiv\frac{೧}{೨}\,(ಪ+ಬ+ಮ)\,\{(ಪ^{೨}—೨ಪಬ+ಬ^{೨})+(ಬ^{೨}—೨ಬಮ+ಮ^{೨})+(ಮ^{೨}—೨ಮಪ+ಪ^{೨})\}$$

$$\equiv\frac{೧}{೨}(ಪ+ಬ+ಮ)\{(ಪ—ಬ)^{೨}+(ಬ—ಮ)^{೨}+(ಮ—ಪ)^{೨}\}.$$

**೨·೬.** ಮೇಲಿನ ಗುಣಕಸೂತ್ರದ ಉಪಯೋಗವನ್ನು ಮಾಡಿ ನಾವು ಈಗ ಕೆಲವು ರಾಶಿಗಳ ಗುಣಪೃಥಕ್ಕರಣವನ್ನು ಮಾಡುವಾ.

**ಉ. ೧.** $೮ಯ^{೩}+೨೭ರ^{೩}+ಲ^{೩}—೧೮ಯರಲ$. ಇಲ್ಲಿ $೮ಯ^{೩}$ ಮತ್ತು $೨೭ರ^{೩}$ ಇವು ಅನುಕ್ರಮವಾಗಿ ೨ಯ ಮತ್ತು ೩ರ ಇವುಗಳ ಘನಗಳಿದ್ದು ೧೮ಯರಲ ಇದು ೨ಯ, ೩ರ ಮತ್ತು ಲ ಇವುಗಳ ಗುಣಾಕಾರದ ಮುಮ್ಮಡಿ ಇರುವದರಿಂದ ಮೇಲಿನ ಸೂತ್ರವನ್ನು ಮುಂದಿನಂತೆ ಉಪಯೋಗಿಸಲು ಬರುವದು.

$$ರಾಶಿಯು = (೨ಯ)^{೩}+(೩ರ)^{೩}+ಲ^{೩}—೩.\,೨ಯ.\,೩ರ.ಲ$$

$$= (೨ಯ+೩ರ+ಲ)$$

$$(೪ಯ^{೨}+೯ರ^{೨}+ಲ^{೨}—೬ಯರ—೩ರಲ—೨ಲಯ).$$

**ಉ. ೨.** $ತ^{೩}—ದ^{೩}+ನ^{೩}+೩ತದನ$. $—ದ^{೩}=+(—ದ)^{೩}$, ಮತ್ತು $೩ತದನ=—೩ತ(—ದ)ನ$.

∴ ರಾಶಿಯು $=$ ತ³ + (−ದ)³ + ನ³ − ೩ತ(−ದ)ನ

$=$ (ತ − ದ + ನ){ತ² + (−ದ)² + ನ² − ತ(−ದ) − (−ದ)ನ − ನತ}

$=$ (ತ − ದ + ನ)(ತ² + ದ² + ನ² + ತದ + ದನ − ನತ).

ಮುಂದೆ ಬಿಡಿಸಿ ತೋರಿಸಿದ ಉದಾಹರಣೆಗಳಲ್ಲಿ ಸ್ಥಳ ಸಂಕೋಚದ ಮೂಲಕ ಕೇವಲ ಸೂತ್ರವನ್ನು ಉಪಯೋಗಿಸಿ ಗುಣಪೃಥಕ್ಕರಣವನ್ನು ಮಾಡಿದೆ. ಆದರೆ ಅಭ್ಯಾಸ ಮಾಡುವವರು ಮೂಲರೀತಿಯನ್ನವಲಂಬಿಸುವದು ಹೆಚ್ಚು ಹಿತಕರವಾದುದು.

**ಉ. ೩.** ೨೧೬ಯ³ − ೬೪ರ³ − ೧೨೫ಲ³ − ೩೬೦ಯರಲ.

$=$ (೬ಯ)³ + (−೪ರ)³ + (−೫ಲ)³ − ೩·೬ಯ(−೪ರ)(−೫ಲ)

$=$ (೬ಯ − ೪ರ − ೫ಲ)

(೩೬ಯ² + ೧೬ರ² + ೨೫ಲ² + ೨೪ಯರ − ೨೦ರಲ + ೩೦ಲಯ).

**ಉ. ೪.** ೮ಅ³ − ೬೪ಕ³ + ೨೪ಅಕ + ೧. ಇಲ್ಲಿ ೮ಅ³, −೬೪ಕ³ ಮತ್ತು ೧ ಇವು ಅನುಕ್ರಮವಾಗಿ ೨ಅ, −೪ಕ ಮತ್ತು ೧ ಇವುಗಳ ಘನಗಳು

೨೪ಅಕ $=$ −೩.೨ಅ(−೪ಕ)·೧.

∴ ರಾಶಿಯು $=$ (೨ಅ)³ + (−೪ಕ)³ + (೧)³ − ೩·೨ಅ(−೪ಕ)·೧

$=$ (೨ಅ − ೪ಕ + ೧)

(೪ಅ² + ೧೬ಕ² + ೧ + ೮ಅಕ + ೪ಕ − ೨ಅ)

$=$ (೨ಅ − ೪ಕ + ೧)

(೪ಅ² + ೮ಅಕ + ೧೬ಕ² − ೨ಅ + ೪ಕ + ೧).

**ಉ. ೫.** ೬೪ಅ⁶ + ೧೬ಅ³ + ೧. ಇಲ್ಲಿ ೧೬ಅ³ ದ −೮ಅ³ ಮತ್ತು ೨೪ಅ³ ಹೀಗೆ ಭಾಗಗಳನ್ನು ಮಾಡಿದರೆ,

ರಾಶಿಯು = ೬೪ಅ⁶ − ೮ಅ³ + ೧ + ೨೪ಅ³

= (೪ಅ²)³ + (−೨ಅ)³ + (೧)³ − ೩·೪ಅ²(−೨ಅ) . ೧

= (೪ಅ² − ೨ಅ + ೧)(೧೬ಅ⁴ + ೪ಅ² + ೧ + ೮ಅ³ + ೨ಅ − ೪ಅ²)

= (೪ಅ² − ೨ಅ + ೧)(೧೬ಅ⁴ + ೮ಅ³ + ಅ² + ೨ಅ + ೧).

**ಉ. ೬.** ಯ³ − $\frac{೬೪}{ಯ³}$ − ೧೩. ಇಲ್ಲಿ −೧೩ ರ −೧ ಮತ್ತು −೧೨ ಹೀಗೆ ಭಾಗಗಳನ್ನು ಮಾಡಿದರೆ,

ರಾಶಿಯು $= ಯ^{೩} - \frac{೬೪}{ಯ^{೩}} - ೮ - ೨೪$

$= (ಯ)^{೩} + \left(-\frac{೪}{ಯ}\right)^{೩} + (-೨)^{೩} - ೩ಯ\left(-\frac{೪}{ಯ}\right)(-೨)$

$= \left(ಯ - \frac{೪}{ಯ} - ೨\right)\left(ಯ^{೨} + \frac{೧೬}{ಯ^{೨}} + ೪ + ೪ - \frac{೮}{ಯ} + ೨ಯ\right)$

$= \left(ಯ - ೨ - \frac{೪}{ಯ}\right)\left(ಯ^{೨} + ೨ಯ + ೮ - \frac{೮}{ಯ} + \frac{೧೬}{ಯ^{೨}}\right).$

**ಉ. ೭.** $(ಯ+ರ-ಲ)^{೩}+(ರ+ಲ-ಯ)^{೩}+(ಲ+ಯ-ರ)^{೩}$ $-೩(ಯ+ರ-ಲ)(ರ+ಲ-ಯ)(ಲ+ಯ-ರ)$ ಕ್ಕೆ $(ಯ+ರ+ಲ)$ ದಿಂದ ಭಾಗಿಸಿದರೆ ಭಾಗಾಕಾರವು ಏನು ಬರುವದು ?

ಭಾಜ್ಯ $= \frac{೧}{೨}\{(ಯ+ರ-ಲ)+(ರ+ಲ-ಯ)+(ಲ+ಯ-ರ)\}$

$\times \left[\{(ಯ+ರ-ಲ)-(ರ+ಲ-ಯ)\}^{೨} + \{(ರ+ಲ-ಯ)-(ಲ+ಯ-ರ)\}^{೨} + \{(ಲ+ಯ-ರ)-(ಯ+ರ-ಲ)\}^{೨}\right]$

$= \frac{೧}{೨}(ಯ+ರ+ಲ)\{(೨ಯ-೨ಲ)^{೨}+(೨ರ-೨ಯ)^{೨}+(೨ಲ-೨ರ)^{೨}\}$

$= \frac{೧}{೨}(ಯ+ರ+ಲ)\{೪(ಯ-ಲ)^{೨}+೪(ರ-ಯ)^{೨}+೪(ಲ-ರ)^{೨}\}$

$= ೨(ಯ+ರ+ಲ)\{(ಯ-ಲ)^{೨}+(ರ-ಯ)^{೨}+(ಲ-ರ)^{೨}\}$

$= ೪(ಯ+ರ+ಲ)(ಯ^{೨}+ರ^{೨}+ಲ^{೨}-ಯರ-ರಲ-ಲಯ)$

$\therefore$ ಭಾಗಾಕಾರ $= ೪(ಯ^{೨}+ರ^{೨}+ಲ^{೨}-ಯರ-ರಲ-ಲಯ)$

## ಪ್ರಶ್ನ ಸಂಗ್ರಹ ೧೨.

ಗುಣ ಪೃಥಕ್ಕರಣವನ್ನು ಮಾಡಿರಿ :

೧. $ಅ^{೩} + ಕ^{೩} - ಗ^{೩} + ೩ಅಕಗ$. ೨. $ತ^{೩} - ದ^{೩} - ನ^{೩} - ೩ತದನ$.

೩. ಯ$^{೩}$ + ೮ರ$^{೩}$ + ಲ$^{೩}$ − ೬ಯರಲ.　　೪. ೮ಯ$^{೩}$ + ೨೭ರ$^{೩}$ + ೧೨೫ಲ$^{೩}$ − ೯೦ಯರಲ.

೫. ೬೪ತ$^{೩}$ − ದ$^{೩}$ + ೮ನ$^{೩}$ + ೨೪ತದನ.

೬. ೧೨೫ಕ$^{೩}$ − ೮ಗ$^{೩}$ − ಫ$^{೩}$ − ೩೦ಕಗಫ.

೭. ೮ಙ$^{೩}$ + ೨೭ಕ$^{೩}$ + ೧೮ಙಕ − ೧.

೮. ೬೪ಙ$^{೩}$ − ೧೨೫ಕ$^{೩}$ − ೧೨೦ಙಕ − ೮.

೯. ೮ಪ$^{೬}$ + ೯೯ಪ$^{೩}$ − ೬೪.　　೧೦. ಯ$^{೬}$ + ೨೬ಯ$^{೩}$ + ೧೨೫.

೧೧. ಯ$^{೩}$ − ರ$^{೩}$ + $\frac{೧}{೨೭}$ಸ$^{೩}$ + ಯರಸ.

೧೨. ೮ಸ$^{೩}$ − $\frac{೧}{೨೭}$ಬ$^{೩}$ − $\frac{೧}{೮}$ಮ$^{೩}$ − ಸಬಮ.

೧೩. ಕ್ಷ$^{೩}$ + $\frac{೧}{ಕ್ಷ^{೩}}$ − ೨.　　೧೪. ಪ$^{೩}$ + $\frac{೮}{ಪ^{೩}}$ + ೬.

೧೫. ೮ಪ$^{೩}$ − $\frac{೨೭}{ಪ^{೩}}$ − ೫೪.

## ಮೂರನೆಯ ಪ್ರಕರಣ

# ಗುಣಪೃಥಕ್ಕರಣದ ವಿಷಯದಲ್ಲಿ ಇನ್ನೂ ಕೆಲವು ಸಂಗತಿಗಳು

## ೧.

## ಶೇಷ ಸಿದ್ಧಾಂತ

೩೧. ಮುಂದಿನ ಭಾಗಾಕಾರವನ್ನು ನಾವು ಲಕ್ಷ್ಯಪೂರ್ವಕವಾಗಿ ಅಭ್ಯಸಿಸುವಾ.

$$\text{ಯ} - \text{ಪ})\ \text{ಅಯ}^3 + \text{ಕಯ}^2 + \text{ಗಯ} + \text{ಘ}\ (\text{ಅಯ}^2 + \text{ಯ}(\text{ಅಪ} + \text{ಕ}) + (\text{ಅಪ}^2 + \text{ಕಪ} + \text{ಗ})$$

$$\text{ಅಯ}^3 - \text{ಅಪಯ}^2$$

$$(\text{ಅಪ} + \text{ಕ})\text{ಯ}^2 + \text{ಗಯ}$$

$$(\text{ಅಪ} + \text{ಕ})\text{ಯ}^2 - (\text{ಅಪ}^2 + \text{ಕಪ})\text{ಯ}$$

$$(\text{ಅಪ}^2 + \text{ಕಪ} + \text{ಗ})\text{ಯ} + \text{ಘ}$$

$$(\text{ಅಪ}^2 + \text{ಕಪ} + \text{ಗ})\text{ಯ} - (\text{ಅಪ}^3 + \text{ಕಪ}^2 + \text{ಗಪ})$$

$$\text{ಅಪ}^3 + \text{ಕಪ}^2 + \text{ಗಪ} + \text{ಘ}$$

ಇಲ್ಲಿ **ಭಾಜ್ಯ** [ಮೂಲ ರಾಶಿಯು] ಮತ್ತು **ಶೇಷ** ಇವುಗಳಲ್ಲಿ ಹೋಲಿಕೆ ನಮಗೆ ಕಾಣಬರುವದೇನೆಂದರೆ **ಭಾಜ್ಯ**ದಲ್ಲಿ **ಯ** ದ ಬದಲಾಗಿ **ಪ** ಇಟ್ಟರೆ ಯಾವ ರಾಶಿಯು ಬರುವದೋ ಅದೇ **ಶೇಷ**ವಿರುತ್ತದೆ. ಮತ್ತು ಇದರ ಮೇಲಿಂದ ಹೊರಡುವ ನಿಷ್ಕರ್ಷವೇನೆಂದರೆ **ಯ** ಇಲ್ಲವೆ ಬೇರೆ ಯಾವುದೇ ವರ್ಣದ ಭಿನ್ನ ಘಾತಗಳಿಂದಾದ ರಾಶಿಯನ್ನು ಪ್ರಥಮ ಘಾತದ ಪದದ ಸಹಗುಣಕವು ೧ ಇರುವಂಥ ಅದೇ ವರ್ಣದ, **ಯ — ಪ** ದ ಸ್ವರೂಪದ, ಪ್ರಥಮ ಘಾತ ದ್ವಿಪದಿಯಿಂದ ಭಾಗಿಸಿದರೆ ಮತ್ತು ಶೇಷ ಎಷ್ಟುಳಿಯುವದನ್ನಷ್ಟೇ ನಮಗೆ ನೋಡುವದಿದ್ದರೆ, ಪ್ರತ್ಯಕ್ಷ ಭಾಗಾಕಾರವನ್ನು ಮಾಡದೆ ಕೇವಲ ಭಾಜ್ಯದಲ್ಲಿ **ಯ** ದ ಬದಲಾಗಿ **ಪ** ವನ್ನು ಇಟ್ಟರೆ ಶೇಷವನ್ನು ಹೇಳಲು ಬರಬೇಕು. ಇದರ ತಾಳೆಯನ್ನು ಮುಂದೆ ಒಂದೆರಡು ಭಾಗಾಕಾರಗಳನ್ನು ಮಾಡಿ ನಾವು ನೋಡುವಾ.

$೨ಕ್ಷ^{೩} + ೭ಕ್ಷ^{೨} - ೪ಕ್ಷ + ೫$ ಇದನ್ನು $ಕ್ಷ - ೩$ ರಿಂದ ಭಾಗಿಸಿ ಬರುವ ಶೇಷವು ನಮಗೆ ಬೇಕಾಗಿದೆ ಎಂದು ತಿಳಿಯಿರಿ. ಪ್ರತ್ಯಕ್ಷ ಭಾಗಾಕಾರವನ್ನು ಮಾಡಿದರೆ,

$ಕ್ಷ - ೩$ ) $೨ಕ್ಷ^{೩} + ೭ಕ್ಷ^{೨} - ೪ಕ್ಷ + ೫$ ( $೨ಕ್ಷ^{೨} + ೧೩ಕ್ಷ + ೩೫$

$೨ಕ್ಷ^{೩} - ೬ಕ್ಷ^{೨}$

$೧೩ಕ್ಷ^{೨} - ೪ಕ್ಷ$

$೧೩ಕ್ಷ^{೨} - ೩೯ಕ್ಷ$

$೩೫ಕ್ಷ + ೫$

$೩೫ಕ್ಷ - ೧೦೫$

೧೧೦

ಈಗ ಭಾಜ್ಯದಲ್ಲಿ ಕ್ಷ ದ ಬದಲಾಗಿ ೩ ಇಟ್ಟರೆ ಭಾಜ್ಯದ ಬೆಲೆಯು ಎಷ್ಟಾಗುವದೆಂಬುದನ್ನು ನೋಡುವಾ.

$ಕ್ಷ = ೩$ ಇದ್ದರೆ ಭಾಜ್ಯವು $= ೨.೩^{೩} + ೭.೩^{೨} - ೪.೩ + ೫$

$= ೫೪ + ೬೩ - ೧೨ + ೫ = ೧೧೦$. ಮೇಲೆ ಪ್ರತ್ಯಕ್ಷ ಭಾಗಾಕಾರವನ್ನು ಮಾಡಿ ಇದೇ ಶೇಷ ಬಂದಿದೆಯೆಂದು ನಾವು ನೋಡಿದ್ದೇವೆ.

೩·೨. ಈಗ ಇದು ಹೀಗೇ ಏಕೆ ಆಗುತ್ತದೆಂಬುದನ್ನು ನೋಡುವಾ. ನಮಗೆ ಮುಂದಿನ ಸಂಗತಿಯು ಗೊತ್ತೇ ಇದೆ.

ಭಾಜಕ ) ಭಾಜ್ಯ ( ಭಾಗಾಕಾರ

........

ಶೇಷ

ಭಾಜ್ಯ = ಭಾಜಕ × ಭಾಗಾಕಾರ + ಶೇಷ. ಇದೊಂದು **ನಿತ್ಯಸಮವಿರು**ತ್ತದೆ. ಮೊದಲನೆಯ ಉದಾಹರಣೆಯಲ್ಲಿ, $೨ಕ್ಷ^{೩} + ೭ಕ್ಷ^{೨} - ೪ಕ್ಷ + ೫ =$ $(ಕ್ಷ - ೩) \times$ ಭಾಗಾಕಾರ + ಶೇಷ. ಕ್ಷ ದ ಯಾವುದೇ ಬೆಲೆಯನ್ನು ಹಿಡಿದರೂ ಈ ಸಮೀಕರಣವು ನಿಜವಿರುತ್ತದೆ. ಕ್ಷ ದ ಬೆಲೆಯು ೩ ಎಂದು ತಿಳಿದರೆ ಏನಾಗುತ್ತದೆಂಬುದನ್ನು ನೋಡಿರಿ. $೨.೩^{೩} + ೭.೩^{೨} - ೪.೩ + ೫$ $= (೩ - ೩) \times$ ಭಾಗಾಕಾರ + ಶೇಷ $= ೦ \times$ ಭಾಗಾಕಾರ + ಶೇಷ.

∴ ಶೇಷ = ೨·೩$^{೩}$ + ೭·೩$^{೨}$ − ೪·೩ + ೫

= ೫೪ + ೬೩ − ೧೨ + ೫ = ೧೧೦.

ಇದರಂತೆಯೇ ಮೊಟ್ಟಮೊದಲಿನ ಉದಾಹರಣೆಯ ವಿಚಾರವನ್ನು ನಾವು ಮಾಡಿದರೆ ಅಲ್ಲಿ ಅಯ$^{೩}$ + ಕಯ$^{೨}$ + ಗಯ + ಘ = (ಯ − ಪ) × ಭಾಗಾಕಾರ + ಶೇಷ. ಯ ದ ಯಾವುದೇ ಬೆಲೆಯನ್ನು ಹಿಡಿದರೂ ಈ ಸಮೀಕರಣವು ನಿಜವಿರುವದು. ಇಲ್ಲಿ ಯ ದ ಬದಲಾಗಿ ಪ ಇಟ್ಟರೆ,

ಅಪ$^{೩}$ + ಕಪ$^{೨}$ + ಗಪ + ಘ = (ಪ − ಪ) × ಭಾಗಾಕಾರ + ಶೇಷ

= ೦ × ಭಾಗಾಕಾರ + ಶೇಷ = ಶೇಷ.

ಈ ಎಲ್ಲ ವಿವೇಚನೆಯಿಂದ ಮುಂದಿನ ಸಂಗತಿಯು ಸ್ಪಷ್ಟವಾಗುವದು.

ಯ ದ (ಇಲ್ಲವೆ ಬೇರೆ ಯಾವದೇ ವರ್ಣದ) ಘಾತಗಳಿಂದಾದ ಬೇಕಾದ ರಾಶಿಯಲ್ಲಿ ಯ ದ ಬದಲಾಗಿ ಪ ವನ್ನು ಇಟ್ಟು ದೊರಕಿದ ಬೆಲೆಯೇ ಯ−ಪ ದಿಂದ ಭಾಗಿಸಿ ಬರುವ ಶೇಷವಿರುವದು. ಈ ಸಿದ್ಧಾಂತಕ್ಕೆ **ಶೇಷ ಸಿದ್ಧಾಂತ**ವೆನ್ನುತ್ತಾರೆ. ಬೀಜಗಣಿತದಲ್ಲಿಯ ಇದರ ಉಪಯೋಗದ ವಿವರಣೆಯನ್ನು ಮುಂದಿನ ಅನುವಾಕದಲ್ಲಿ ಮಾಡಿದೆ. ಶೇಷ ಸಿದ್ಧಾಂತದ ಉಪಯೋಗವನ್ನು ಮಾಡಿ ಮುಂದಿನ ಉದಾಹರಣೆಗಳಲ್ಲಿ ಪ್ರತ್ಯಕ್ಷ ಭಾಗಾಕಾರವನ್ನು ಮಾಡದೇ ಶೇಷವನ್ನು ಹೇಗೆ ಹೇಳಿದೆ ಎಂಬುದನ್ನು ನೋಡಿರಿ. ವೇಳೆ ಮತ್ತು ಉತ್ಸಾಹವಿದ್ದರೆ ಪ್ರತ್ಯಕ್ಷ ಭಾಗಿಸಿ ತಾಳೆಯನ್ನು ಮಾಡಿ ನೋಡಬಹುದು.

**ಉ. ೧.** ೫ಕ್ಷ$^{೩}$ − ೪ಕ್ಷ$^{೨}$ + ೨ಕ್ಷ − ೧ ಇದನ್ನು ಕ್ಷ − ೪ ರಿಂದ ಭಾಗಿಸಿದರೆ **ಶೇಷ**ವೆಷ್ಟು ?

**ಶೇಷ** = ೫·೪$^{೩}$ − ೪·೪$^{೨}$ + ೨·೪ − ೧ = ೩೨೦ − ೬೪ + ೮ − ೧ = **೨೬೩.**

**ಉ. ೨.** ೩ಕ್ಷ$^{೩}$ + ೨ಕ್ಷ$^{೨}$ − ೫ಕ್ಷ − ೬ ಇದನ್ನು ಕ್ಷ + ೨ ರಿಂದ ಭಾಗಿಸಿದರೆ **ಶೇಷ**ವೆಷ್ಟು? ಇಲ್ಲಿ **ಭಾಜಕ** = ಕ್ಷ + ೨ = ಕ್ಷ − (−೨). ಆದುದರಿಂದ **ಭಾಜ್ಯ**ದಲ್ಲಿ ಕ್ಷ ದ ಸ್ಥಳದಲ್ಲಿ −೨ನ್ನು ಇಡಬೇಕು.

∴ ಶೇಷ = ೩(−೨)$^{೩}$ + ೨(−೨)$^{೨}$ − ೫(−೨) − ೬ = −೨೪ + ೮ +

೧೦ − ೬ = **−೧೨.**

ಇಲ್ಲಿ ಕ್ಷದ ಬದಲಾಗಿ −೨ನ್ನು ಏಕೆ ಇಡಲಿಕ್ಕೆಬೇಕು ಎಂಬುದು ಮುಂದಿನ ವಿವೇಚನೆಯ ಮೇಲಿಂದ ಸ್ಪಷ್ಟವಾಗುವದು. ೩ಕ್ಷ$^{೩}$ + ೨ಕ್ಷ$^{೨}$ − ೫ಕ್ಷ − ೬

$=$ (ಕ್ಷ$+$೨)$\times$ **ಭಾಗಾಕಾರ**$+$**ಶೇಷ.** ಈಗ ಈ ಸಮೀಕರಣದಲ್ಲಿ ಕ್ಷ$+$೨ $=$೦ ಇದ್ದಾಗ ಅಂದರೆ ಕ್ಷ$= -$೨ ಇರುವಾಗ ಮಾತ್ರ ಬಲಬದಿಯಲ್ಲಿರುವ (ಕ್ಷ$+$೨)$\times$ **ಭಾಗಾಕಾರ** ಈ ಭಾಗವು ಇಲ್ಲದ ಹಾಗೆ ಆಗಿ ಅಲ್ಲಿ **ಶೇಷ** ಮಾತ್ರ ಉಳಿಯುವದು. ಆ ಮೇಲೆ ಶೇಷವು $೩(-೨)^{೪}+೨(-೨)^{೨}-೫(-೨)-೬$ ಇರುವದು.

ಆದುದರಿಂದ **ಶೇಷ** ಸಿದ್ಧಾಂತದ ಉಪಯೋಗವನ್ನು ಮಾಡುವ ಸಮಯದಲ್ಲಿ ಲಕ್ಷ್ಯದಲ್ಲಿಡತಕ್ಕ ಮುಖ್ಯ ಸಂಗತಿ ಯಾವುದೆಂದರೆ ಭಾಜಕ ರಾಶಿಯ ಬೆಲೆಯು ಶೂನ್ಯವೆಂದು ಕಲ್ಪಿಸಿ ಅದರೊಳಗಿನ ವರ್ಣದ ಯಾವ ಬೆಲೆಯು ಬರುವದೋ ಅದನ್ನು ಆ ವರ್ಣದ ಬದಲಾಗಿ ಭಾಜ್ಯದಲ್ಲಿ ಇಡುವದು.

**ಉ. ೩.** $೨ನ^{೪}-ನ^{೩}+೨ನ^{೨}+೪ನ+೩$ ಇದನ್ನು $ನ+೩$ ಇದರಿಂದ ಭಾಗಿಸಿದರೆ **ಶೇಷ**ವೆಷ್ಟು?

$$\text{ಶೇಷ} = ೨(-೩)^{೪}-(-೩)^{೩}+೨(-೩)^{೨}+೪(-೩)+೩$$

$$= ೧೬೨+೨೭+೧೮-೧೨+೩=೧೯೮.$$

## ಪ್ರಶ್ನ ಸಂಗ್ರಹ ೧೩.

ಮುಂದಿನ ಉದಾಹರಣೆಗಳಲ್ಲಿ **ಶೇಷ**ವೆಷ್ಟೆಂಬುದನ್ನು ಹೇಳಿರಿ.

೧. $೪ಅ^{೩}-೫ಅ^{೨}-೭ಅ+೩$ ಭಾಗಿಲೆ $ಅ-೨$.

೨. $೩ಅ^{೪}-೨ಅ^{೨}+೪ಅ-೫$ ಭಾಗಿಲೆ $ಅ+೨$.

೩. $೮ಕ್ಷ^{೩}-೪ಕ್ಷ^{೨}+೬ಕ್ಷ-೭$ ಭಾಗಿಲೆ $ಕ್ಷ+೩$.

೪. $೯ಯ^{೩}-೨ಯ^{೨}+೬ಯ+೪$ ಭಾಗಿಲೆ $ಯ-೩$.

೫. $ಕ್ಷ^{೪}-೭ಕ್ಷ^{೩}-ಕ್ಷ^{೨}+೫ಕ್ಷ-೧$ ಭಾಗಿಲೆ $ಕ್ಷ-೪$.

೬. $ಯ^{೫}-೪ಯ^{೩}+೭ಯ^{೨}+೨$ ಭಾಗಿಲೆ $ಯ-೨$.

೭. $ವ^{೩}-೨ವ^{೨}+೫ವ-೧೮$ ಭಾಗಿಲೆ $ವ+೪$.

೮. $೭ಕ್ಷ^{೫}+೮ಕ್ಷ^{೪}-೭ಕ್ಷ+೩$ ಭಾಗಿಲೆ $ಕ್ಷ+೨$.

೯. $ರ^{೩}+೭ರ^{೨}-೪ರ-೧$ ಭಾಗಿಲೆ $ರ-೫$.

೧೦. $೨ಅ^{೩}-ಅ^{೨}-೧೦ಅ+೨$ ಭಾಗಿಲೆ $ಅ+೫$.

## ೨.

## ಗುಣಕ ಸಿದ್ಧಾಂತ

೩.೩. ಮೇಲೆ ಪ್ರಸ್ತಾಪಿಸಿದ **ಶೇಷ ಸಿದ್ಧಾಂತದ** ಉಪಯೋಗವೇನೆಂಬುದನ್ನು ನಾವು ಈಗ ವಿಚಾರ ಮಾಡುವಾ.

ಯ³ − ೧೦ಯ² + ೩೧ಯ − ೩೦ ಇದನ್ನು ಯ − ೩ ಇಂದ ಭಾಗಿಸಿದರೆ **ಶೇಷ**ವೆಷ್ಟು? ಶೇಷ = ಯ ದ ಬದಲಾಗಿ ೩ ಹಿಡಿದು ಬರುವ ರಾಶಿಯ ಬೆಲೆಯು = ೩³ − ೧೦·೩² + ೩೧·೩ − ೩೦ = ೨೭ − ೯೦ + ೯೩ − ೩೦ = ೦· ಶೇಷವು ಸೊನ್ನೆ ಇದ್ದದ್ದರಿಂದ ರಾಶಿಗೆ ಯ − ೩ ಇಂದ ನಿಃಶೇಷವಾಗಿ ಭಾಗ ಹೋಗುವದು, ಅಂದರೆಯೇ ಯ − ೩ ಇದು ಆ ರಾಶಿಯ ಒಂದು ಗುಣಕವಿರುವದು. ೩ ಇಂದ ೧೫ ಕ್ಕೆ ನಿಃಶೇಷ ಭಾಗ ಹೋಗುವದು, ೩ ಇದು ೧೫ ರ ಒಂದು ಗುಣಕವಿರುವದೆಂಬುದೇ ಇದರ ಅರ್ಥವು. ವಿರುದ್ಧ ಪಕ್ಷದಲ್ಲಿ ೪ ಇಂದ ೧೫ ಕ್ಕೆ ನಿಃಶೇಷವಾಗಿ ಭಾಗ ಹೋಗುವದಿಲ್ಲ. ಭಾಗಿಸಿದರೆ ಶೇಷವು ಉಳಿಯುವದು. ಇದರ ಅರ್ಥವೇನೆಂದರೆ, ೪ ಇದು ೧೫ ರ ಗುಣಕವಲ್ಲ. ಶೇಷ ಸಿದ್ಧಾಂತದ ಉಪಯೋಗವನ್ನು ಮಾಡಿದರೆ ಒಂದು ವಿಶಿಷ್ಟ ಏಕಘಾತ ದ್ವಿಪದಿಯು ಕೊಟ್ಟ ರಾಶಿಯ ಗುಣಕವಿದೆಯೋ ಇಲ್ಲವೋ ಎಂಬುದನ್ನು ಗುರುತಿಸಲು ಬರುವದು. ಮೇಲಿನ ಉದಾಹರಣೆಯಲ್ಲಿ ಶೇಷವು ಶೂನ್ಯ ಬರುವದರಿಂದ ಯ − ೩ ಇದು ಆ ರಾಶಿಯ ಗುಣಕವಿದೆ ಎಂದು ಸಂದೇಹವಿಲ್ಲದೆ ಹೇಳಲು ಬರುವದು. ವಿರುದ್ಧ ಪಕ್ಷದಲ್ಲಿ ಯ − ೬ ಇದು ರಾಶಿಯ ಗುಣಕವಿದೆಯೋ ಎಂದು ಕೇಳಿದರೆ ಯ − ೬ ಇಂದ ಭಾಗಿಸಿದರೆ ಶೇಷವು = ೬³ − ೧೦·೬² + ೩೧·೬ − ೩೦ = ೨೧೬ − ೩೬೦ + ೧೮೬ − ೩೦ = ೧೨ ಇರುವದರಿಂದ ರಾಶಿಗೆ ಯ − ೬ ಇಂದ ನಿಃಶೇಷವಾಗಿ ಭಾಗ ಹೋಗುವದಿಲ್ಲ, ಅಂದರೆ ಅದು ಆ ರಾಶಿಯ ಗುಣಕವಲ್ಲ ಎಂದು ಸಹ ನಾವು ಹೇಳಬಹುದು.

**೩·೪.** ಒಂದು ಗುಣಕವು ತಿಳಿದರೆ ಉಳಿದ ಗುಣಕಗಳನ್ನು ಹೇಳುವದು ಹೆಚ್ಚು ಸುಲಭವಿರುವದು. ಮೇಲಿನ ಉದಾಹರಣೆಯಲ್ಲಿ ಯ − ೩ ಇದು ಒಂದು ರಾಶಿಯ ಗುಣಕವಿದೆಯೆಂದು ತಿಳಿದಕಾರಣ ಗುಣಪೃಥಕ್ಕರಣಕ್ಕಾಗಿ ಮೊದಲನೆಯ ಗುಣಕವು ಯ − ೩ ಬರುವಂತೆ ಕೆಳಗೆ ತೋರಿಸಿದಂತೆ ರಾಶಿಯನ್ನು ಮಂಡಿಸಿ ಉಳಿದ ಗುಣಕಗಳನ್ನು ಸುಲಭವಾಗಿ ಹೇಳಲು ಬರುವದು.

ಕ್ಷ ದ ಬದಲಾಗಿ −೨ ಇಟ್ಟರೆ ರಾಶಿಯ ಬೆಲೆಯು =(−೨$^{೩}$)+(−೨)$^{೨}$−೧೪(−೨)−೩೦=−೮+೪+೨೮−೩೦=−೬ ಅಂದರೆ ರಾಶಿಯನ್ನು ಕ್ಷ+೨ ರಿಂದ ಭಾಗಿಸಿದರೆ ಶೇಷವು −೬ ಉಳಿಯುವದು. ಆದುದ-ರಿಂದ ಕ್ಷ+೨ ಇದು ಅದರ ಗುಣಕವಲ್ಲ, ಆದರೆ ಅದರಲ್ಲಿ ೬ ಕೂಡಿಸಿದರೆ ಶೇಷವು ಶೂನ್ಯ ಬರುವದು. ಅಂದರೆ ಕ್ಷ+೨ ಇದು ಗುಣಕವಿರಬೇಕಾದರೆ ರಾಶಿಯಲ್ಲಿ ೬ ಕೂಡಿಸಬೇಕು. ಮತ್ತು ತರುವಾಯ

ಕ್ಷ$^{೩}$+೨ಕ್ಷ$^{೨}$−೧೪ಕ್ಷ−೩೦+೬=ಕ್ಷ$^{೩}$+ಕ್ಷ$^{೨}$−೧೪ಕ್ಷ−೨೪

=ಕ್ಷ$^{೩}$+೨ಕ್ಷ$^{೨}$−ಕ್ಷ$^{೨}$−೨ಕ್ಷ−೧೨ಕ್ಷ−೨೪

=ಕ್ಷ$^{೨}$(ಕ್ಷ+೨)−ಕ್ಷ(ಕ್ಷ+೨)−೧೨(ಕ್ಷ+೨)

=(ಕ್ಷ+೨)(ಕ್ಷ$^{೨}$−ಕ್ಷ−೧೨)

=(ಕ್ಷ+೨)(ಕ್ಷ+೩)(ಕ್ಷ+೪).

**ಉ. ೩** ಯ$^{೨}$−೭ಯ+ಕ ಇದರಲ್ಲಿ ಯ ದ ಬೆಲೆಯು ಎಷ್ಟು ಇದ್ದರೆ ಅದಕ್ಕೆ ಯ−೨ ರಿಂದ ನಿಃಶೇಷವಾಗಿ ಭಾಗ ಹೋಗುವದು ?

ರಾಶಿಯನ್ನು ಯ −೨ ರಿಂದ ಭಾಗಿಸಿದರೆ, ಶೇಷವು =೨$^{೨}$−೭·೨+ಕ=೪−೧೪+ಕ = −೧೦+ಕ. ಕ ದ ಬೆಲೆಯು **೧೦** ಇದ್ದರೆ ಈ ಶೇಷವು ಶೂನ್ಯವಿರುವದು, ಅಂದರೆ ಯ−೨ ರಿಂದ ಭಾಗಹೋಗುವದು.

[ ತಾಳೆ: ಯ$^{೨}$−೭ಯ+೧೦=(ಯ−೨)(ಯ−೫) . ]

**ಉ. ೪.** ಅ ಮತ್ತು ಕ ಇವುಗಳ ಯಾವ ಬೆಲೆಗಳು ಇದ್ದರೆ ೨ಯ$^{೩}$−೧೧ಯ$^{೨}$+ಅಯ+ಕ ಕ್ಕೆ ಯ−೩ ಮತ್ತು ಯ−೪ ಈ ಎರಡರಿಂದಲೂ ನಿಃಶೇಷವಾಗಿ ಭಾಗ ಹೋಗುವದು ?

ಯ−೩ ರಿಂದ ಭಾಗಿಸಿದರೆ, ಶೇಷವು=೨.೩$^{೩}$−೧೧.೩$^{೨}$+೩ಅ+ಕ=೫೪−೯೯+೩ಅ+ಕ=೩ಅ+ಕ−೪೫.

ಯ−೪ ರಿಂದ ಭಾಗಿಸಿದರೆ ಶೇಷವು=೨·೪$^{೩}$−೧೧.೪$^{೨}$+೪ಅ+ಕ=೧೨೮−೧೭೬+೪ಅ+ಕ=೪ಅ+ಕ−೪೮.

∴ ಯ−೩ ರಿಂದ ಭಾಗಹೋಗಬೇಕಾದರೆ, ೩ಅ+ಕ−೪೫=೦, ಅಂದರೆ

೩ಅ+ಕ=೪೫. (೧)

ಮತ್ತು, ಯ−೪ ರಿಂದ ಭಾಗ ಹೋಗಬೇಕಾದರೆ, ೪ಅ+ಕ−೪೮=೦ ಅಂದರೆ

೪ಅ+ಕ=೪೮, (೨) ಇರಲೇಬೇಕು. ಎರಡೂ ಸಮೀಕರಣಗಳನ್ನು ಬಿಡಿಸಿದರೆ ಅ=೩ ಮತ್ತು ಕ=೩೬ ಇದ್ದರೆ ರಾಶಿಗೆ ಎರಡರಿಂದಲೂ ಭಾಗಹೋಗುವದೆಂದು ಕಂಡುಬರುವದು.

## ಪ್ರಶ್ನಸಂಗ್ರಹ ೧೪.

ಮುಂದೆ ಕೊಟ್ಟ ಪ್ರತಿಯೊಂದು ಉದಾಹರಣೆಯ ಮೊದಲನೆಯ ರಾಶಿಯಲ್ಲಿ ಎರಡನೆಯ ರಾಶಿಯು ಗುಣಕವಿರುವದೋ ಇಲ್ಲವೋ ಎಂಬುದನ್ನು ಹುಡುಕಿ ತೆಗೆಯಿರಿ. ಮತ್ತು ಇದ್ದರೆ ಮೊದಲನೆಯ ರಾಶಿಯ ಗುಣಪೃಥಕ್ಕರಣವನ್ನು ಮಾಡಿರಿ. ಮತ್ತು ಇಲ್ಲದಿದ್ದರೆ ಅದರಲ್ಲಿ ಯಾವ ಸಂಖ್ಯೆಯನ್ನು ಕೂಡಿಸಿದರೆ ಸಿದ್ಧವಾದ ರಾಶಿಯಲ್ಲಿ ಅದು ಗುಣಕವಿರುವದು ಎಂಬುದನ್ನು ಹೇಳಿರಿ. ತರುವಾಯ ಹೊಸ ರಾಶಿಯ ಗುಣಪೃಥಕ್ಕರಣವನ್ನು ಮಾಡಿರಿ.

೧. $ಯ^{3} - ೮ಯ^{2} - ೪ಯ + ೯೮; ಯ + ೨$.

೨. $೪ವ^{3} - ೧೬ವ^{2} + ೯ವ + ೯; ವ - ೩$.

೩. $೩ಕ್ಷ^{3} - ೧೬ಕ್ಷ^{2} + ೨೩ಕ್ಷ - ೬; ಕ್ಷ - ೩$.

೪. $ವ^{3} - ೩ವ^{2} - ೩೪ವ + ೧೦೦; ವ - ೪$.

೫. $ಯ^{3} + ೫ಯ^{2} - ೨ಯ - ೨೦; ಯ + ೪$.

೬. $೪ರ^{3} - ೮ರ^{2} - ೫೫ರ - ೪೦; ರ - ೫$.

೭. $೫ಕ್ಷ^{2} + ೨೭ಕ್ಷ + ಕ$ ಕ್ಕೆ $ಕ್ಷ - ೮$ ರಿಂದ ಭಾಗಹೋಗಬೇಕಾದರೆ, ಕ=?

೮. $೧೦ಯ^{3} - ೨೧ಯ^{2} + ಅಯ + ೪$ ಕ್ಕೆ $ಯ - ೨$ ರಿಂದ ಭಾಗ ಹೋಗಬೇಕಾದರೆ, ಅ = ?

೯. $೩ಸ^{3} - ೮ಸ^{2} + ಅಸ + ಕ$ ಕ್ಕೆ $ಸ + ೪$ ಮತ್ತು $ಸ - ೭$ ರಿಂದ ಭಾಗ ಹೋಗಬೇಕಾದರೆ ಅ = ? ಕ = ?

೧೦. $೭ಕ್ಷ^{4} + ೬ಕ್ಷ^{3} - ೪೦ಕ್ಷ^{2} + ಅಕ್ಷ + ಕ$ ಕ್ಕೆ $ಕ್ಷ - ೨$, $ಕ್ಷ + ೩$ ರಿಂದ ಭಾಗಹೋಗುತ್ತಿದ್ದರೆ ಅ = ?, ಕ = ?

೧೧. $ಪ^{4} + ಅಪ^{3} - ೪೯ಪ^{2} + ಕಪ + ೬೦$ ಕ್ಕೆ $ಪ - ೪$, $ಪ - ೫$ ರಿಂದ ಭಾಗ ಹೋಗುತ್ತಿದ್ದರೆ ಅ = ?, ಕ ?

೧೨. $ಅಯ^{4} + ೪ಯ^{3} + ಕಯ^{2} + ೩೨ಯ - ೧೫$ ಕ್ಕೆ $ಯ - ೧$, $ಯ + ೫$ ರಿಂದ ಭಾಗ ಹೋಗುತ್ತಿದ್ದರೆ ಅ = ?, ಕ = ?.

## ೩.

### ಕೆಲವು ಗುಣಕ ನಿಯಮಗಳು ಮತ್ತು ಬಹುಪದಿಗಳ ಗುಣಪೃಥಕ್ಕರಣ

.... .... = (ಯ—೧)(....) ; .... .... = (ಯ+೧)(....) : = .... (....)

೩·೬. ಮೇಲೆ ವಿವೇಚಿಸಿದ **ಗುಣಕ ಸಿದ್ಧಾಂತದ** ಮೇಲಿಂದ ಗುಣಕಗಳ ಬಗ್ಗೆ ಕೆಲವು ನಿಯಮಗಳನ್ನು ನಮಗೆ ಪ್ರಸ್ಥಾಪಿಸಲು ಬರುವದು. ಅವು ಹೀಗೆ ಎಂದರೆ ಅಯ$^{೪}$+ಕಯ$^{೩}$+ಖಯ$^{೨}$+ಗಯ+ಘ ದಂಥ ಯಾವುದಾದರೊಂದು ಬಹುಪದಿಯಲ್ಲಿ ಯ—ದ ಈ ಗುಣಕವಿದ್ದರೆ, ರಾಶಿಯಲ್ಲಿ ಯ ದ ಬದಲಾಗಿ ದ ಇಟ್ಟು ಸಿದ್ಧವಾದ ರಾಶಿಯ ಬೆಲೆಯು ಶೂನ್ಯವಿರಬೇಕು. ಅದರಂತೆಯೇ ಯ—೧ ಈ ಗುಣಕವಿದ್ದರೆ ಯ=೧ ಎಂದು ತಿಳಿದು ಸಿದ್ಧವಾದ ರಾಶಿಯ ಬೆಲೆಯು ಶೂನ್ಯವಿರಬೇಕು. ಈಗ ಯ=೧ ಎಂದು ತಿಳಿದರೆ ರಾಶಿಯ ಬೆಲೆಯು ಅ+ಕ+ಖ+ಗ+ಘ ಆಗುವದು. ಆದುದರಿಂದ ಅ+ಕ+ಖ+ಗ+ಘ=೦ ಇದ್ದರೆ ಯ-೧ ಇದು ರಾಶಿಯ ಒಂದು ಗುಣಕವಿರುವದು. ಮತ್ತು ಅ,ಕ,ಖ,ಗ, ಘ ಇವು ರಾಶಿಯಲ್ಲಿ ಯ ದ ಘಾತಗಳ ಸಹಗುಣಕಗಳವೆ. (ಘ ಅಂದರೆ ಘಯ$^{೦}$, ಅಂದರೆ ಘ ಇದು ಯ ದ ಸಹ ಗುಣಕವಿರುವದೆಂದು ತಿಳಿಯಬಹುದು.) ಆದುದರಿಂದ,

**ನಿಯಮ ೧.** **ಯ ದ (ಇಲ್ಲಿವೆ ಬೇರೆ ಯಾವುದೇ ವರ್ಗದ) ಬೇರೆ ಬೇರೆ ಘಾತಗಳಿಂದ ಸಿದ್ಧವಾದ ರಾಶಿಯಲ್ಲಿ ಯ ದ ಎಲ್ಲ ಘಾತಗಳ ಸಹಗುಣಕಗಳ ಬೈಜಿಕ ಬೇರೀಜು ಶೂನ್ಯವಿದ್ದರೆ ಯ-೧ ಇದು ಆ ರಾಶಿಯು ಗುಣಕವಿರುವದು, ಹಾಗೆ ಇಲ್ಲದಿದ್ದರೆ ಅದು ಇರುವದಿಲ್ಲ.**

ಉದಾಹರಣೆಗಾಗಿ, ೮ಕ್ಷ$^{೩}$—೬ಕ್ಷ$^{೨}$—೨೩ಕ್ಷ+೨೧ ಇವರಲ್ಲಿ ೮—೬—೨೩+೨೧=೦, ಆದುದರಿಂದ ಕ್ಷ—೧ ಇದು ಆ ರಾಶಿಯ ಒಂದು ಗುಣಕವು ಇದ್ದಿರಲಿಕ್ಕೇಬೇಕು. ಈ ಸಂಗತಿಯನ್ನು ಲಕ್ಷ್ಯದಲ್ಲಿಟ್ಟುಕೊಂಡು ಗುಣಪೃಥಕ್ಕರಣಕ್ಕಾಗಿ ರಾಶಿಯನ್ನು ಕೆಳಗಿನಂತೆ ಮಂಡಿಸಲು ಬರುವದು.

೮ಕ್ಷ$^{೩}$—೬ಕ್ಷ$^{೨}$—೨೩ಕ್ಷ+೨೧

=೮ಕ್ಷ$^{೩}$—೮ಕ್ಷ$^{೨}$+೨ಕ್ಷ$^{೨}$—೨ಕ್ಷ—೨೧ಕ್ಷ+೨೧

=೮ಕ್ಷ$^{೨}$(ಕ್ಷ—೧)+೨ಕ್ಷ(ಕ್ಷ—೧)—೨೧(ಕ್ಷ—೧)

= (ಕ್ಷ − ೧)(೮ಕ್ಷ$^{೨}$ + ೨ಕ್ಷ − ೨೧)
= (ಕ್ಷ − ೧)(೨ಕ್ಷ − ೩)(೪ಕ್ಷ + ೭).

೩೭. ಈಗ ಅಯು$^{೪}$ + ಕಯು$^{೩}$ + ಖಯು$^{೨}$ + ಗಯು + ಘ ಇದರಲ್ಲಿ ಯ + ೧ ಇದು ಗುಣಕವಿದ್ದರೆ ಅದರ ಬೆಲೆಯು ಶೂನ್ಯವಾಗುವದು; ಮತ್ತು ಯ ದ ಬದಲಾಗಿ −೧ ಇಟ್ಟರೆ ರಾಶಿಯ ಬೆಲೆಯು ಅ(−೧)$^{೪}$ + ಕ(−೧)$^{೩}$ + ಖ(−೧)$^{೨}$ + ಗ(−೧) + ಘ, ಅಂದರೆ ಅ − ಕ + ಖ − ಗ + ಘ ಆಗುವದು. ಆದರಿಂದಲೇ ಯ + ೧ ಇದು ಗುಣಕವಿದ್ದರೆ, ಅ − ಕ + ಖ − ಗ + ಘ = ೦. ಅಂದರೆ ಅ + ಖ + ಘ = ಕ + ಗ.

ಇಲ್ಲಿ ಅ, ಖ, ಘ ಇವು ಸಮಘಾತಗಳ ಸಹಗುಣಕಗಳಿದ್ದು, ಕ, ಗ ಇವು ವಿಷಮ ಘಾತಗಳ ಸಹ ಗುಣಕಗಳಾಗಿರುತ್ತವೆ. ಇದರ ಮೇಲಿಂದ ಮುಂದಿನ ನಿರ್ಣಯವು ದೊರೆಯುತ್ತದೆ.

**ನಿಯಮ ೨.** **ಯ ದ (ಇಲ್ಲವೇ ಬೇರೆ ಯಾವುದೇ ವರ್ಣದ) ಬೇರೆ ಬೇರೆ ಘಾತಕಗಳಿಂದ ಸಿದ್ಧವಾದ ಯಾವುದೇ ರಾಶಿಯಲ್ಲಿ ಸಮಘಾತಗಳ ಸಹಗುಣಕಗಳ ಬೈಜಿಕ ಬೇರೀಜು ಮತ್ತು ವಿಷಮ ಘಾತಗಳ ಸಹಗುಣಕಗಳ ಬೈಜಿಕ ಬೇರೀಜು ಇವು ಸಮಾನವಿದ್ದರೆ ಯ + ೧ ಇದು ಆ ರಾಶಿಯ ಒಂದು ಗುಣಕವಿರುತ್ತದೆ. ಹಾಗೆ ಇರದಿದ್ದರೆ ಅದು ಇರುವದಿಲ್ಲ.** ಉದಾಹರಣೆಗಾಗಿ,

೬ಕ್ಷ$^{೩}$ + ೧೩ಕ್ಷ$^{೨}$ + ೨ಕ್ಷ − ೫ ಇದರಲ್ಲಿ ಸಮಘಾತಗಳ ಸಹಗುಣಕಗಳ ಬೇರೀಜು = ೧೩ − ೫ = ೮, ಮತ್ತು ವಿಷಮ ಘಾತಗಳ ಸಹಗುಣಕಗಳ ಬೇರೀಜು = ೬ + ೨ = ೮ ಇರುವದರಿಂದ ಕ್ಷ + ೧ ಇದು ರಾಶಿಯ ಒಂದು ಗುಣಕವಿದ್ದಿರಬೇಕು. ಇದು ತಿಳಿದೊಡನೆಯೇ ಗುಣಪೃಥಕ್ಕರಣಕ್ಕಾಗಿ ರಾಶಿಯನ್ನು ಮುಂದಿನಂತೆ ಮಂಡಿಸಲು ಬರುವದು.

೬ಕ್ಷ$^{೩}$ + ೧೩ಕ್ಷ$^{೨}$ + ೨ಕ್ಷ − ೫
= ೬ಕ್ಷ$^{೩}$ + ೬ಕ್ಷ$^{೨}$ + ೭ಕ್ಷ$^{೨}$ + ೭ಕ್ಷ − ೫ಕ್ಷ − ೫
= ೬ಕ್ಷ$^{೨}$(ಕ್ಷ + ೧) + ೭ಕ್ಷ(ಕ್ಷ + ೧) − ೫(ಕ್ಷ + ೧)
= (ಕ್ಷ + ೧)(೬ಕ್ಷ$^{೨}$ + ೭ಕ್ಷ − ೫)
= (ಕ್ಷ + ೧)(೨ಕ್ಷ − ೧)(೩ಕ್ಷ + ೫).

೩.೮. ಅಯ$^{೪}$ + ಕಯ$^{೩}$ + ಖಯ$^{೨}$ + ಗಯ + ಘ ಈ ರಾಶಿಯು ನಯ + ಪ ಈ ಗುಣಕವಿದ್ದರೆ ಯ ದ ಯಾವುದೇ ಬೆಲೆಯನ್ನು ಹಿಡಿದರೂ ಅದು ಅದರ ಗುಣಕವಿರುವದು. ಯ ದ ಬೆಲೆಯು ೧ ಎಂದು ತಿಳಿದರೆ ಅಯ$^{೪}$ + .................. ಈ ರಾಶಿಯ ಬೆಲೆಯು ಅ + ಕ + ಖ + ಗ + ಘ ಅಂದರೆ ಸಹಗುಣಕಗಳ ಬೈಜಿಕ ಬೇರೀಜಿನಷ್ಟು ಇರುವದು. ಮತ್ತು ನಯ + ಪ ದ ಬೆಲೆಯು ನ + ಪ ಇರುವದು. ಇದರ ಮೇಲಿಂದ ಸಿದ್ಧವಾಗುವದೇನೆಂದರೆ, ನಯ + ಪ ದಂತಹ ಏಕಘಾತ ದ್ವಿಪದಿಯು ಗುಣಪೃಥಕ್ಕರಣಕ್ಕಾಗಿ ಕೊಟ್ಟ ಅಯ$^{೪}$ + ಕಯ$^{೩}$ + ಖಯ$^{೨}$ + ಗಯ + ಘ ಈ ಸ್ವರೂಪದ ರಾಶಿಯ ಗುಣಕವಿರಬೇಕಾದರೆ ನ + ಪ ಇದು ರಾಶಿಯಲ್ಲಿಯ ಸಹಗುಣಕಗಳ ಬೇರೀಜಿನ ಗುಣಕವಿರಬೇಕು. ಅಂದರೆಯೇ ಆ ಬೇರೀಜಿಗೆ (ಅ + ಕ + ಖ + ಗ + ಘ ಕ್ಕೆ) ನ + ಪ ದಿಂದ ಭಾಗ ಹೋಗಬೇಕು. ಹಾಗೆ ಇದ್ದರೆಯೇ ನಯ + ಪ ಈ ಗುಣಕವಿರುವ ಸಂಬಂಧವು. ಹಾಗೆ ಇಲ್ಲದಿದ್ದರೆ ಇರುವದಿಲ್ಲ. ಆದುದರಿಂದ ಮೂರನೆಯ ಮಹತ್ವದ ನಿಯಮವು ಯಾವುದೆಂದರೆ **ಯ ದ (ಇಲ್ಲವೇ ಬೇರೆ ಯಾವದೇ ವರ್ಣದ) ಬೇರೆ ಬೇರೆ ಘಾತಗಳಿಂದ ಸಿದ್ಧವಾದ ರಾಶಿಯಲ್ಲಿಯ ಸಹಗುಣಕಗಳ ಬೇರೀಜಿಗೆ ನಯ + ಪ ದಂತಹ ಯಾವ ಏಕಘಾತ ದ್ವಿಪದಿಯಲ್ಲಿಯ ಸಹಗುಣಕಗಳ ಬೇರೀಜಿನಿಂದ ಭಾಗ ಹೋಗುವದೋ ಅದೇ ದ್ವಿಪದಿಯು ಆ ರಾಶಿಯ ಗುಣಕವಿರುವ ಸಂಬಂಧವು, ಬೇರೆ ಯಾವುದೂ ಇಲ್ಲ.**

ನಿಯಮ ೩.

ಗುಣಪೃಥಕ್ಕರಣಕ್ಕಾಗಿ ಈ ನಿಯಮವು ಹೇಗೆ ಉಪಯೋಗವಾಗುವದೆಂಬುದನ್ನು ಈಗ ನೋಡುವಾ.

**ಉ.೧.** ಯ$^{೩}$ + ೫ಯ$^{೨}$ — ೨ಯ — ೨೪ ಈ ರಾಶಿಯ ಗುಣಪೃಥಕ್ಕರಣವನ್ನು ಮಾಡಬೇಕಾಗಿದೆಯೆಂದು ತಿಳಿಯಿರಿ. ಇಲ್ಲಿ ಸಹಗುಣಗಳ ಬೇರೀಜು ≠ ೦, ಆದುದರಿಂದ ಯ — ೧ ಇದು ಗುಣಕವಿಲ್ಲ. ಸಮಘಾತಗಳ ಸಹಗುಣಕಗಳ ಬೇರೀಜು ≠ ವಿಷಮ ಘಾತಗಳ ಸಹಗುಣಕಗಳ ಬೇರೀಜು, ಆದುದರಿಂದ ಯ + ೧ ಇದಾದರೂ ಗುಣಕವಿಲ್ಲ. ಮತ್ತು ಸ್ಥಿರ ಪದ ೨೪ ಇದೆ ಮತ್ತು ಅದರ ಅವಯವಗಳು ೨, ೩, ೪.... ಇರುವವು. ಆದುದರಿಂದ ರಾಶಿಯ ಯ + ೨, ಯ — ೨, ಯ + ೩, ಯ — ೩, ಯ + ೪, ಯ — ೪ ಹೀಗೆ ಅವಯವಗಳು

ಸಂಭವಿಸುವವು. ಈಗ ಇವುಗಳೊಳಗಿನ ಪ್ರತಿಯೊಂದರ ಪರೀಕ್ಷಣೆಯನ್ನು ಕ್ರಮವಾಗಿ ಮಾಡುವಾ.

ರಾಶಿಯಲ್ಲಿಯ ಸಹಗುಣಕಗಳ ಬೈಜಿಕ ಬೇರೀಜು — ೨೦ ಇರುತ್ತದೆ. ಯ+೨ ರಲ್ಲಿ ಸಹಗುಣಕಗಳ ಬೈಜಿಕ ಬೇರೀಜು ೩. —೨೦ ಕ್ಕೆ ೩ ರಿಂದ ಭಾಗಹೋಗುವದಲ್ಲ. ಆದುದರಿಂದ ಯ+೨ ಇದು ಅವಯವವಿರಲಾರದು.

ಯ—೨ ರಲ್ಲಿ ಸಹಗುಣಕಗಳ ಬೇರೀಜು —೧. ಇದು ಗುಣಕವಿರುವದು ಸಂಭಂಧವಿದೆ. ಇದ್ದರೆ ಯ=೨ ಹಿಡಿದು ರಾಶಿಯ ಬೆಲೆಯು ಶೂನ್ಯವಿರಬೇಕು. ಅದು ಇದೆಯೋ ಹೇಗೆ ಎಂಬುದನ್ನು ನೋಡುವಾ.

ಯ=೨ ಇದ್ದರೆ ರಾಶಿಯ ಬೆಲೆಯು $=೨^{೩}+೫\cdot೨^{೨}-೨\cdot೨-೨೪=೮+೨೦-೪-೨೪=೦$. ಸಹಜವಾಗಿಯೇ ಯ—೨ ಇದೊಂದು ಗುಣಕವಿದೆ.

ಎರಡನೆಯ ಗುಣಕವು ಯ+೩ ಇರಬಹುದೆ? ಇಲ್ಲಿ ಸಹಗುಣಕಗಳ ಬೈಜಿಕ ಬೇರೀಜು ೪. ೪ರಿಂದ—೨೦ಕ್ಕೆ ಭಾಗಹೋಗುವದು. ಆದುದರಿಂದ ಯ+೩ ಇದೊಂದು ಗುಣಕವಿರುವ ಸಂಭವವಿದೆ. ಇದ್ದರೆ ಯ= —೩ ಎಂದು ಹಿಡಿದು ರಾಶಿಯ ಬೆಲೆಯು ಶೂನ್ಯವಾಗಬೇಕು. ಹಾಗೆ ಅದು ಆಗುತ್ತದೆಯೋ ಹೇಗೆ ಎಂಬುದನ್ನು ನೋಡುವಾ. ಯ= —೩ ಇದ್ದರೆ ರಾಶಿಯು =
$(-೩)^{೩}+೫(-೩)^{೨}-೨(-೩)-೨೪=-೨೭+೪೫+೬-೨೪=೦$.
ಸಹಜವಾಗಿಯೇ ಯ+೩ ಇದಾದರೂ ರಾಶಿಯ ಒಂದು ಗುಣಕವಿದೆ.

ಈಗ ರಾಶಿಯು ತ್ರಿಘಾತವಿದ್ದುದರಿಂದ ಯ—ಪ ಈ ಸ್ವರೂಪದ ಮೂರೇ ಗುಣಕಗಳಿರುವದು ಸಾಧ್ಯವಿದೆ, ಮತ್ತು ಅವುಗಳೊಳಗಿನ ಒಂದು ಗುಣಕ ಯ—೨ ಮತ್ತು ಎರಡನೆಯದು ಯ+೩ ಇದ್ದು ರಾಶಿಯ ಮೊದಲನೆಯ ಪದ $ಯ^{೩}$ ಇದ್ದು ಕೊನೆಯದು—೨೪ ಇರುತ್ತದೆ. ಆದುದರಿಂದ ಮೂರನೆಯದು ಯ+೪ ಇದ್ದೇ ಇದ್ದಿರಬೇಕು. ಇದರ ಹೊರತು ಬೇರೆ ಇರಲಾರದು. ಅದೇ ಇದೆಯೋ ಇಲ್ಲವೋ ಎಂಬುದನ್ನು ಖಾತ್ರಿ ಮಾಡಿಕೊಳ್ಳುವದಕ್ಕಾಗಿ ರಾಶಿಯಲ್ಲಿ ಯ=—೪ ಹಾಕಿ ಅದರ ಬೆಲೆಯು ಶೂನ್ಯ ಬರುತ್ತದೆಯೋ, ಇಲ್ಲವೋ ಎಂಬುದನ್ನು ನೋಡುವಾ.

$$ಯ=-೪ \text{ ಇದ್ದರೆ ರಾಶಿಯು } =(-೪)^{೩}+೫(-೪)^{೨}-೨(-೪)-೨೪=-೬೪+೮೦+೮-೨೪=೦.$$

∴ ಯ$^{3}$ + ೫ಯ$^{2}$ − ೨ಯ − ೨೪ = (ಯ + ೨)(ಯ + ೩)(ಯ + ೪).

ಮೇಲಿನ ಮಾದರಿಯ ಉದಾಹರಣೆಗಳನ್ನು ರಾಶಿಯ ಒಂದು ಗುಣಕವು ತಿಳಿದನಂತರ ಮೇಲಿನಂತೆ ದೀರ್ಘವಾದ ಮತ್ತು ವೇಳೆಯು ಬಹಳ ತಗಲುವ ರೀತಿಯನ್ನು ಅವಲಂಬಿಸದೇ ಮುಂದೆ ತೋರಿಸಿದಂತೆ ಬಿಡಿಸುವದು ಹೆಚ್ಚು ಅನುಕೂಲವೂ, ಸುಲಭವೂ ಎಂದು ಕಂಡುಬರುವದು. ಇಲ್ಲಿ ಯ − ೨ ಇದೊಂದು ಗುಣಕವಿದೆ, ಎಂದು ತಿಳಿದ ತರುವಾಯ ರಾಶಿಯನ್ನು ಮುಂದೆ ತೋರಿಸಿದಂತೆ ಮಂಡಿಸಲು ಬರುವದು.

ಯ$^{3}$ + ೫ಯ$^{2}$ − ೨ಯ − ೨೪

= ಯ$^{3}$ − ೨ಯ$^{2}$ + ೭ಯ$^{2}$ − ೧೪ಯ + ೧೨ಯ − ೨೪

= ಯ$^{2}$(ಯ − ೨) + ೭ಯ(ಯ − ೨) + ೭ಯ(ಯ − ೨)

+ ೧೨ (ಯ − ೨)

= (ಯ − ೨) (ಯ$^{2}$ + ೭ಯ + ೧೨)

[ಈ ವರ್ಗತ್ರಿಪದಿಯ ಗುಣಕಗಳನ್ನು ನೋಡಿದಾಕ್ಷಣವೇ ಹೇಳಲು ಬರುವದು]

= (ಯ − ೨) (ಯ + ೩) (ಯ + ೪).

**ಉ.೨.** ೬ಕ್ಷ$^{4}$ − ೫ಕ್ಷ$^{3}$ − ೩೯ಕ್ಷ$^{2}$ − ೪ಕ್ಷ + ೧೨ ಈ ರಾಶಿಯನ್ನು ಗುಣಪೃಥಕ್ಕರಣಕ್ಕಾಗಿ ತೆಗೆದುಕೊಳ್ಳುವಾ. ಸಹಗುಣಕಗಳ ಬೇರೀಜು ≠ ೦, ಆದುದರಿಂದ ಕ್ಷ − ೧ ಇದು ಗುಣಕವಿಲ್ಲ.

ಸಮಘಾತಗಳ ಸಹಗುಣಕಗಳ ಬೇರೀಜು (−೨೧) ≠ ವಿಷಮಘಾತಗಳ ಸಹಗುಣಕಗಳ ಬೇರೀಜು (−೯). ಆದುದರಿಂದ ಕ್ಷ + ೧ ಇದು ಗುಣಕವಿಲ್ಲ.

ಈಗ ಸಂಭವನೀಯ ಗುಣಕಗಳೊಳಗಿನ ಒಂದೊಂದರ ಪರೀಕ್ಷೆಯನ್ನು ಮಾಡುವಾ. ಕ್ಷ + ೨ ಇರಬಹುದೇ? ಇದರ ಸಹಗುಣಕಗಳ ಬೇರೀಜು ೩. ರಾಶಿಯ ಸಹಗುಣಕಗಳ ಬೈಜಿಕ ಬೇರೀಜು − ೩೦, ಇದಕ್ಕೆ ೩ ರಿಂದ ಭಾಗ ಹೋಗುತ್ತದೆ. ಅಂದಮೇಲೆ ಕ್ಷ + ೨ ಇದು ಗುಣಕವಿರುವ ಸಂಭವವಿದೆ. ಕ್ಷ = − ೨ ಹಿಡಿದರೆ ರಾಶಿಯ ಬೆಲೆಯು ಶೂನ್ಯವಾಗುತ್ತದೆಯೇ ಎಂಬುದನ್ನು ನೋಡುವಾ.

ಕ್ಷ $=$ −೨ ಇದ್ದರೆ ರಾಶಿಯು

$= ೬(-೨)^{೪} - ೩೯(-೨)^{೨} - ೪(-೨) + ೧೨$

$= ೯೬ + ೪೦ - ೧೫೬ + ೮ + ೧೨ = ೦.$

ಆದುದರಿಂದ ಕ್ಷ+೨ ಇದೊಂದು ಗುಣಕವಾಗಿದೆಯೆಂಬುದು ನಿಶ್ಚಿತ. ಇದರಂತೆಯೇ ಮುಂದೆ ಕ್ರಮವಾಗಿ ಕ್ಷ−೨, ಕ್ಷ+೩, ಕ್ಷ−೩ ಇವುಗಳನ್ನು ನೋಡಿದರೆ ಕ್ಷ−೨ ಮತ್ತು ಕ್ಷ+೩ ಇವು ಗುಣಕಗಳಲ್ಲ; ಕ್ಷ−೩ ಇದು ಇರುವದೆಂದು ಕಂಡು ಬರುತ್ತದೆ. ರಾಶಿಯು

$= ೬ಕ್ಷ^{೪} + ೧೨ಕ್ಷ^{೩} - ೧೭ಕ್ಷ^{೩} - ೩೪ಕ್ಷ^{೨} - ೫ಕ್ಷ^{೨} - ೧೦ + ೬ಕ್ಷ + ೧೨$

$= ೬ಕ್ಷ^{೩}(ಕ್ಷ+೨) - ೧೭ಕ್ಷ^{೨}(ಕ್ಷ+೨) - ೫ಕ್ಷ(ಕ್ಷ+೨) + ೬(ಕ್ಷ+೨)$

$= (ಕ್ಷ+೨)(೬ಕ್ಷ^{೩} - ೧೭ಕ್ಷ^{೨} - ೫ಕ್ಷ + ೬)$

$= (ಕ್ಷ+೨)(೬ಕ್ಷ^{೩} - ೧೮ಕ್ಷ^{೨} + ಕ್ಷ^{೨} - ೩ಕ್ಷ - ೨ಕ್ಷ + ೬)$

$= (ಕ್ಷ+೨)\{೬ಕ್ಷ^{೨}(ಕ್ಷ-೩) + ಕ್ಷ(ಕ್ಷ-೩) - ೨(ಕ್ಷ-೩)\}$

$= (ಕ್ಷ+೨)(ಕ್ಷ-೩)(೬ಕ್ಷ^{೨} + ಕ್ಷ - ೨)$

$= (ಕ್ಷ+೨)(ಕ್ಷ-೩)(೨ಕ್ಷ-೧)(೩ಕ್ಷ+೨).$

**ಉ.೩.** $೬ಕ್ಷ^{೪} + ೭ಕ್ಷ^{೩} - ೭೩ಕ್ಷ^{೨} + ಅಕ್ಷ + ಕ$ ಕ್ಕೆ $ಕ್ಷ^{೨} + ಕ್ಷ - ೧೨$ ರಿಂದ ಭಾಗಹೋಗುತ್ತಿದ್ದರೆ ಅ=?, ಕ=?.

$ಕ್ಷ^{೨} + ಕ್ಷ - ೧೨ = (ಕ್ಷ-೩)(ಕ್ಷ+೪)$. ಆದುದರಿಂದ $ಕ್ಷ^{೨} + ಕ್ಷ - ೧೨$ ರಿಂದ ಭಾಗಹೋಗುತ್ತಿದ್ದರೆ ಕ್ಷ−೩ ರಿಂದಾದರೂ ಭಾಗಹೋಗಬೇಕು. ಮತ್ತು ಕ್ಷ+೪ ರಿಂದಲೂ ಭಾಗಹೋಗಬೇಕು. ಈಗ ಕ್ಷ−೩ ರಿಂದ ಭಾಗಹೋಗುತ್ತದೆ. ಆದುದರಿಂದ ಕ್ಷ=೩ ಇದ್ದರೆಯೇ ರಾಶಿಯು=೦.

$\therefore ೬.೩^{೪} + ೭.೩^{೩} - ೭೩.೩^{೨} + ೩ಅ + ಕ = ೦$

$\therefore ೪೮೬ + ೧೮೯ - ೬೫೭ + ೩ಅ + ಕ = ೦$

$\therefore ೧೮ + ೩ಅ + ಕ = ೦$

$\therefore ೩ಅ + ಕ = -೧೮ \dots \dots \dots (೧)$

ಇದರಂತೆಯೇ ಕ್ಷ+೪ ರಿಂದ ಭಾಗಹೋಗುತ್ತದೆ, ಆದುದರಿಂದ ಕ್ಷ=−೪ ಇದ್ದರೆ ರಾಶಿಯು=೦

$\therefore ೬(-೪)^{೪} + ೭(-೪)^{೩} - ೭೩(-೪)^{೨} - ೪ಅ + ಕ = ೦$

∴ ೧೫೩೬ − ೪೪೮ − ೧೧೬೮ − ೪ಅ + ಕ = ೦

∴ −೮೦ − ೪ಅ + ಕ=೦

∴ ೪ಅ − ಕ= −೮೦.... .... ....(೩)

(೧) ಮತ್ತು (೩) ಕೂಡಿಸಿದರೆ, ೭ಅ= −೯೮, ಅಂದರೆ ಅ= −೧೪, ಮತ್ತು ಆದುದರಿಂದ ಕ=೨೪.

ಅ= −೧೪, ಕ= ೨೪.

೩೯. ಎಲ್ಲ ಪದಗಳು ಏಕಚಿಹ್ನವಿರುವ ೬ಯ$^{೪}$ + ೩೭ಯ$^{೩}$ + ೭೩ಯ$^{೨}$ + ೫೩ಯ + ೧೨ ದಂತಹ ಸ್ವರೂಪದ ಯಾವುದೇ ರಾಶಿಯ ಗುಣಕವು ಅಯ − ಪ ಈ ಸ್ವರೂಪದ ಅಂದರೆ ಎರಡೂ ಭಿನ್ನ ಚಿಹ್ನ (ಒಂದರ ಚಿಹ್ನ + ಬೇರೊಂದರ −) ಪದಗಳಿರುವ ದ್ವಿಪದಿಯು ಇರಲಾರದು; ಅದು ಅಯ + ಗ ಈ ಸ್ವರೂಪದ ಅಂದರೆ ಎರಡೂ ಏಕಚಿಹ್ನ ಪದಗಳದ್ದೇ ಇರುವದು. ಏಕೆಂದರೆ ಅಯ − ಪ ಈ ಸ್ವರೂಪದ ಗುಣಕವಿದ್ದರೆ ಅಯ=ಪ, ಅಂದರೆ ಯ= $\frac{ಪ}{ಅ}$ ಎಂದು ಹಿಡಿದರೆ ರಾಶಿಯ ಬೆಲೆಯು ಶೂನ್ಯವಾಗಬೇಕು. ಆದರೆ ಯ ದ ಬೆಲೆಯು ಧನ (+) ಇದ್ದರೆ ಮೇಲಿನ ಸ್ವರೂಪದ ರಾಶಿಯ ಬೆಲೆಯು ಅದರೊಳಗಿನ ಪ್ರತಿಯೊಂದು ಪದದ ಬೆಲೆಯು ಧನವಿದ್ದುದರಿಂದ, ಎಂದಿಗೂ ಶೂನ್ಯವಿರಲಾರದು, ಆದರೆ ಅದು ಯಾವದಾದರೊಂದು ಧನ ಸಂಖ್ಯೆಯೇ ಇರುವದು. ಕೊಟ್ಟ ರಾಶಿಯಲ್ಲಿ ಸಂಭವಿಸುವ ಗುಣಕಗಳಾವವು ಎಂಬುದನ್ನು ಹುಡುಕುವ ಸಮಯದಲ್ಲಿ ಈ ಮಾತನ್ನು ಲಕ್ಷ್ಯದಲ್ಲಿಡುವದು ಅವಶ್ಯವಿರುವದು.

## ಪ್ರಶ್ನಸಂಗ್ರಹ ೧೫.

ಕೆಳಗಿನ ರಾಶಿಗಳ ಗುಣಪೃಥಕ್ಕರಣವನ್ನು ಮಾಡಿರಿ:

೧. ರ$^{೩}$ + ೨ರ$^{೨}$ − ೪೩ರ + ೪೦.

೨. ಲ$^{೩}$ + ೧೩ಲ$^{೨}$ + ೪೭ಲ + ೩೫.

೩. ೬ಅ$^{೩}$ + ೫ಅ$^{೨}$ − ೨೧ಅ + ೧೦.

೪. ೧೨ಪ$^{೩}$ + ೨೩ಪ$^{೨}$ + ೬ಪ − ೫.

೫. ೪ರ$^{೩}$ − ೭ರ$^{೨}$ + ೨ರ + ೧.

೬. ೬ರ$^{೩}$ + ೧೯ರ$^{೨}$ + ೨೦ರ + ೭.

೭. ಕ್ಷ$^{೪}$ + ೭ಕ್ಷ$^{೩}$ + ೯ಕ್ಷ$^{೨}$ − ೭ಕ್ಷ − ೧೦.

೮. ೨೫ಅ$^{೪}$ − ೫೦ಅ$^{೩}$ + ೯ಅ$^{೨}$ + ೩೨ಅ − ೧೬.

೯. ೧೫ಯ$^{೪}$ + ೭ಯ$^{೩}$ − ೧೯ಯ$^{೨}$ − ೭ಯ + ೪.

೧೦. ೬ಅ$^{೪}$ + ೫ಅ$^{೩}$ − ೨೮ಅ$^{೨}$ + ೨೭ಅ − ೧೦.

೧೧. ೯ಕ್ಷ$^{೪}$ − ೧೨ಕ್ಷ$^{೩}$ − ೫ಕ್ಷ$^{೨}$ + ೧೨ಕ್ಷ − ೪.

೧೨. ಕ್ಷ$^{೩}$ − ೬ಕ್ಷ$^{೨}$ − ೧೫ಕ್ಷ + ೧೦೦.

೧೩. ಯ$^{೪}$ − ೧೦ಯ$^{೩}$ + ೩೫ಯ$^{೨}$ − ೫೦ಯ + ೨೪.

೧೪. ಕ್ಷ$^{೩}$ − ೬ಕ್ಷ$^{೨}$ − ಕ್ಷ + ೩೦.

೧೫. ೨ನ$^{೩}$ − ೧೧ನ$^{೨}$ + ೧೨ನ − ೯.

೧೬. ೪ಯ$^{೨}$ − ೨೭ಯ − ೨೨.

೧೭. ೪ನ$^{೨}$ − ೫೧ನ + ೧೩೫.

೧೮. ೬ಕ್ಷ$^{೪}$ + ೧೭ಕ್ಷ$^{೩}$ − ೬೫ಕ್ಷ$^{೨}$ + ೪ಕ್ಷ + ೨೦.

೧೯. ೪ಯ$^{೪}$ + ಅಯ$^{೩}$ − ೨೧ಯ + ಕ ಕ್ಕೆ ಯ$^{೨}$ + ಯ + ೬ ಇಂದ ಭಾಗ ಹೋದರೆ ಅ = ?, ಕ = ?.

೨೦. ನ$^{೪}$ + ೮ನ$^{೩}$ + ಅನ$^{೨}$ + ಕನ − ೨೪ ಕ್ಕೆ ನ$^{೨}$ + ೨ನ − ೩ ಇಂದ ಭಾಗ ಹೋದರೆ ಅ = ?, ಕ = ?.

೨೧. ಅನ$^{೪}$ − ೧೬ನ$^{೩}$ − ೨೯ನ$^{೨}$ + ಕನ + ೮ ಕ್ಕೆ ನ$^{೨}$ − ೩ನ − ೪ ಇಂದ ಭಾಗ ಹೋದರೆ ಅ = ?, ಕ = ?.

೨೨. ಅಕ್ಷ$^{೪}$ − ೧೯ಕ್ಷ$^{೩}$ − ೩೭ಕ್ಷ$^{೨}$ + ೬೨ಕ್ಷ + ಕ ಕ್ಕೆ ಕ್ಷ$^{೨}$ − ೨ಕ್ಷ − ೮ ಇಂ ಭಾಗ ಹೋದರೆ ಅ = ?, ಕ = ?.

೨೩. ೮ಕ್ಷ$^{೪}$ + ಅಕ್ಷ$^{೩}$ − ೧೭ಕ್ಷ$^{೨}$ + ಕಕ್ಷ + ೯ ಕ್ಕೆ ಕ್ಷ$^{೨}$ − ೧ ಇಂದ ಭಾಗ ಹೋಗುತ್ತಿದ್ದರೆ ಅ = ?, ಕ = ?.

೪.

೩.೧೧. **ಸಮಕೋಟಿ** ಇಲ್ಲವೆ **ಸಮಘಾತ** ( Homogeneous ) ರಾಶಿಗಳು.

ಕೆಳಗಿನ ಸಾಲುಗಳಲ್ಲಿಯ ರಾಶಿಗಳನ್ನು ಸೂಕ್ಷ್ಮವಾಗಿ ನಿರೀಕ್ಷಿಸಿರಿ.
ಯ + ಕ್ಷ, ಯ − ಕ್ಷ, ಪ + ಬ + ಮ, ೨ಪ + ಬ − ಮ, ಪ − ಬ + ೪ಮ,

$ಪ^೨+ಬ^೨$, $ಪ^೨-ಮ^೨$, $೪ಯ^೨-೨ಯಕ್ಷ+೫ಕ್ಷ^೨$, $ಪ^೨+ಬ^೨+ಮ^೨$
$+೨ಪಬ+೨ಬಮ+೨ಮಪ$,

$ಯ^೩+ರ^೩+ಲ^೩$ ೩ಯರಲ, $ಪ^೩-೩ಪ^೨ಬ+೩ಪ^೨ಬ-ಬ^೩$.

ಪ್ರತಿಯೊಂದು ಸಾಲಿನಲ್ಲಿಯ ರಾಶಿಗಳಲ್ಲಿ ಯಾವುದಾದರೂ ಸಾಮ್ಯವು ಕಂಡು ಬರುವದೋ? ಅದು ಎಂತಹದು? ಮೊದಲನೆಯ ಸಾಲಿನಲ್ಲಿ ಪ್ರತಿಯೊಂದು ರಾಶಿಯಲ್ಲಿಯ ಎಲ್ಲ ಪದಗಳು ಪ್ರಥಮ ಘಾತದವು ಇರುವವು. ಎರಡನೆಯ ಸಾಲಿನಲ್ಲಿಯ ಪ್ರತಿಯೊಂದು ರಾಶಿಯಲ್ಲಿಯ ಎಲ್ಲ ಪದಗಳ ಘಾತಪರಿಮಾಣವು (Degree) ಎರಡು ಇರುವದು, ಮತ್ತು ಮೂರನೆಯ ಸಾಲಿನಲ್ಲಿಯ ಪ್ರತಿಯೊಂದು ರಾಶಿಯಲ್ಲಿಯ ಎಲ್ಲ ಪದಗಳ ಘಾತಪರಿಮಾಣವು ಮೂರು ಇರುವದು.

ಯಾವ ರಾಶಿಗಳೊಳಗಿನ ಎಲ್ಲ ಪದಗಳ ಘಾತಪರಿಮಾಣವು ಒಂದೇ ಇರುವದೋ ಆ ರಾಶಿಗಳಿಗೆ **ಸಮಕೋಟಿ** ಇಲ್ಲವೆ **ಸಮಘಾತ** ರಾಶಿಗಳು ಎಂದೆನ್ನುತ್ತಾರೆ. ಮೇಲಿನ ಮೊದಲನೆಯ ಸಾಲಿನಲ್ಲಿ ಎಲ್ಲ ರಾಶಿಗಳು **ಏಕಕೋಟಿಕ ಸಮಘಾತ ರಾಶಿಗಳು** ಇದ್ದು ಎರಡನೇ ಮತ್ತು ಮೂರನೆಯ ಸಾಲುಗಳಲ್ಲಿ ಅನುಕ್ರಮವಾಗಿ **ದ್ವಿಕೋಟಿಕ** ಮತ್ತು **ತ್ರಿಕೋಟಿಕ ಸಮಘಾತ ರಾಶಿಗಳು** ಇರುತ್ತವೆ.

$ಯ^೩+ರ^೩+$ ಅಯರ ಇದು ಯ, ರ ಮತ್ತು ಅ ಇವುಗಳಿಂದಾದ **ತ್ರಿಕೋಟಿ ಸಮಘಾತ ರಾಶಿ** ಇರುವದು. ಆದರೆ ರಾಶಿಯು ಕೇವಲ ಯ ಮತ್ತು ರ ಈ ವರ್ಣಗಳದ್ದೇ ಇದ್ದು ಅ ಇದು ಯರ ದ ಒಂದು ಸಹಗುಣಕವಿರುತ್ತದೆ, ಎಂದು ತಿಳಿದರೆ ಅದು ಸಮಘಾತವಲ್ಲ.

ಎರಡು ಅಥವಾ ಹೆಚ್ಚು ಸಮಘಾತ ರಾಶಿಗಳ ಗುಣಾಕಾರವು ಯಾವಾಗಲೂ ಸಮಘಾತವೇ ಇರುವದು, ಮತ್ತು ಅದರ ಕೋಟಿಯು ಮೂಲ ರಾಶಿಗಳ ಕೋಟಿಗಳ ಜೇರೀಜಿನಷ್ಟು ಇರುವದೆಂಬುದು ಸ್ಪಷ್ಟವಿದೆ.

೩.೧೨. **ಸಮ ಪ್ರಮಾಣ** ಇಲ್ಲವೆ **ಸಂಮಿತ** (Symmetrical) ರಾಶಿಗಳು.

ಯಾವುದೇ ಎರಡು ವರ್ಣಗಳ ಅದಲುಬದಲನ್ನು ಮಾಡಿದರೆ ಯಾವ ರಾಶಿಗಳಲ್ಲಿ ಬದಲು ಆಗುವದಿಲ್ಲವೋ, ಆ ರಾಶಿಯು ಆ ವರ್ಣಗಳ ವಿಷಯದಲ್ಲಿ

**ಸಮ ಪ್ರಮಾಣ** ಇಲ್ಲದ ಸಂಮಿತವಿದೆಯೆಂದೆನ್ನುತ್ತಾರೆ. ಉದಾಹರಣೆಗಾಗಿ ಪ+ಮ, ಪ$^{೨}$+ಮ$^{೨}$, ಪ$^{೨}$−೨ಪಮ+ಮ$^{೨}$, ೪ಪ$^{೩}$+೭ಪ$^{೨}$ಮ+೭ಪಮ$^{೨}$+೪ಮ$^{೩}$ ಈ ರಾಶಿಗಳು ಪ ಮತ್ತು ಮ ಗಳ ವಿಷಯದಲ್ಲಿ **ಸಮ-ಪ್ರಮಾಣವಿರುವವು.** ಯ+ರ+ಲ, ಯ$^{೨}$+ರ$^{೨}$+ಲ$^{೨}$, ಯರ+ರಲ+ಲಯ, ಯ$^{೩}$+ರ$^{೩}$+ಲ$^{೩}$−೩ಯರಲ ಇವು ಯ,ರ,ಲ ಗಳ ವಿಷಯ-ಗಳಲ್ಲಿ **ಸಮಪ್ರಮಾಣವಿರುವವು.** ಅ (ಪ+ಬ+ಮ) ಇದು ತ್ರಿವರ್ಣ ಏಕಕೋಟಿಕ ಸಮಘಾತ ಸಮಪ್ರಮಾಣ ರಾಶಿಯ ಸರ್ವಸಾಧಾರಣ ರೂಪ-ವಿದ್ದು ಅ (ಪ$^{೨}$+ಬ$^{೨}$+ಮ$^{೨}$)+ಕ(ಪಬ+ಬಮ+ಮಪ) ಇದು ತ್ರಿವರ್ಣ ದ್ವಿಕೋಟಿಕ ಸಮಘಾತ ಸಮಪ್ರಮಾಣ ರಾಶಿಯು ಮತ್ತು ಅ(ಪ$^{೩}$+ಬ$^{೩}$+ಮ$^{೩}$) + ಕ(ಪ$^{೨}$ಬ+ಪಬ$^{೨}$+ಬ$^{೨}$ಮ+ಬಮ$^{೨}$+ಮ$^{೨}$ಪ+ಮಪ$^{೨}$)+ ಗಪಬಮ ಇದು ತ್ರಿವರ್ಣ ತ್ರಿಕೋಟಿಕ ಸಮಘಾತ ಸಮಪ್ರಮಾಣ ರಾಶಿಯು ಸರ್ವಸಾಮಾನ್ಯ ರೂಪವಿರುತ್ತದೆ. ಇಲ್ಲಿ ಅ,ಕ,ಗ ಇವು ಯಾವುದಾದರೂ ಜ್ಞಾತ ಸಹಗುಣಕಗಳಿವೆ. ಅವುಗಳ ಅಂಕಿಕ ಬೆಲೆಯು ಎಷ್ಟಿದ್ದರೂ ಪ,ಬ,ಮ ಈ ಮೂರು ವರ್ಣಗಳೊಳಗಿನ ಯಾವುದೇ ಎರಡರ ಅದಲುಬದಲನ್ನು ಮಾಡಿದರೆ ರಾಶಿಯಲ್ಲಿ ಬದಲಾಗುವದಿಲ್ಲ.

ಸಮಪ್ರಮಾಣ ರಾಶಿಗಳ ಗುಣಾಕಾರವು ಯಾವಾಗಲೂ ಸಮಪ್ರಮಾ-ಣವೇ ಇರುವದು.

### ೩.೧೩. ಚಕ್ರೀಯ ಕ್ರಮ ಮತ್ತು ಚಕ್ರೀಯ ರಾಶಿಗಳು.

ಪಬ+ಬಮ+ಮಪ, ಪ(ಬ−ಮ) +ಬ(ಮ−ಪ)+ಮ(ಪ−ಬ), ಪ$^{೨}$(ಬ−ಮ)+ಬ$^{೨}$(ಮ−ಪ) +ಮ$^{೨}$(ಪ−ಬ), ಪಬ(ಪ−ಬ)+ ಬಮ(ಬ−ಮ)+ಮಪ(ಮ−ಪ), ಪ$^{೩}$(ಬ+ಮ)+ಬ$^{೩}$(ಮ+ಪ)+ ಮ$^{೨}$(ಪ+ಬ) ಇಂತಹ ರಾಶಿಗಳನ್ನು ಸಾವ್ರ


ಆಕೃತಿ ೪

ನಿರೀಕ್ಷಿಸಿದರೆ ಪ್ರತಿಯೊಂದು ರಾಶಿಯಲ್ಲಿ ಪ, ಬ, ಮ ಈ ವರ್ಣಗಳು ವಿಶಿಷ್ಟ ಕ್ರಮದಲ್ಲಿ ಬಂದಿರುವವು. ಮತ್ತು ಪ ದ ಬದಲಾಗಿ ಬ, ಬ ದ ಬದಲಾಗಿ

ಮ ಮತ್ತು ಮ ಬದಲಾಗಿ ಪ ಬರೆದರೆ ರಾಶಿಯಲ್ಲಿ ಯಾವದೂ ಬದಲಾಗುವದಿಲ್ಲವೆಂದು ನಮಗೆ ಕಂಡು ಬರುವದು. ಹಿಂದಿನ ಪುಟದ ಮೇಲಿರುವ ಆಕೃತಿಯಲ್ಲಿ ತೋರಿಸಿದಂತೆ ಈ ವರ್ಣಗಳನ್ನು ಒಂದು ವರ್ತುಲದ ಸುತ್ತಲೂ ಮಂಡಿಸಿದರೆ ಮತ್ತು ಬಾಣಗಳ ದಿಕ್ಕಿನಲ್ಲಿ ಅವುಗಳನ್ನು ಓದಿದರೆ ಯಾವ ಕ್ರಮದಲ್ಲಿ ಅವು ಒಂದರ ಹಿಂದೆ ಒಂದು ಬಂದಿರುವವೋ ಅದೇ ಕ್ರಮದಲ್ಲಿ ಪ್ರತಿಯೊಂದು ರಾಶಿಯಲ್ಲಿ ಅವು ಬಂದಿರುವವು. ಪ ದ ನಂತರ ಬ, ಬ ದ ನಂತರ ಮ, ಮ ದ ನಂತರ ಪ, ಇದು ಅವುಗಳ ಕ್ರಮವಿರುವದು. ಉದಾಹರಣೆಗಾಗಿ ಪ, ಬ, ಮ ಈ ವರ್ಣಗಳೊಳಗಿನ ಎರಡೆರಡರ ಗುಣಾಕಾರಗಳಿಂದ ಸಿದ್ಧವಾದ ಪಬ + ಬಮ + ಮಪ ಈ ಮೊದಲನೇ ರಾಶಿಯನ್ನು ನಾವು ತೆಗೆದುಕೊಂಡರೆ ಅದರಲ್ಲಿ ಆ ವರ್ಣಗಳು ಮೇಲೆ ಹೇಳಿದ ಕ್ರಮದಲ್ಲಿ ಬಂದಿರುವವು ಕಂಡುಬರುವದು. ಮಂಡಿಸುವ ಈ ಕ್ರಮಕ್ಕೆ **ಚಕ್ರೀಯ ಕ್ರಮವೆಂದು** ಸಂಜ್ಞೆಇದ್ದು ಈ ತರಹದ ರಾಶಿಗಳಿಗೆ **ಚಕ್ರೀಯ** ರಾಶಿಗಳೆಂದೆನ್ನುತ್ತಾರೆ. ಯಾವುದೇ **ಚಕ್ರೀಯ ರಾಶಿಯಲ್ಲಿ** ಯ ಒಂದು ಪದವು ತಿಳಿದರೆ ನಮಗೆ ಉಳಿದ ಪದಗಳನ್ನು ಒಮ್ಮೆಲೇ ಹೇಳಲು ಬರುತ್ತದೆ. ಉದಾಹರಣೆಗಾಗಿ $ಯ(ರ^2 - ವ^2)$ + .... + .... ಈ ಚಕ್ರೀಯ ರಾಶಿಯಲ್ಲಿಯ ಕೊನೆಯ ಇದ್ದ ಎರಡು ಪದಗಳು ಯಾವವು ಇರಬೇಕೆಂಬುವದನ್ನು ಕೊಟ್ಟ ಪದಗಳ ರಚನೆಯ ಕಡೆಗೆ ನೋಡಿದೊಡನೆಯೇ ನಮಗೆ ತಿಳಿಯುತ್ತದೆ. ಮತ್ತು ರಾಶಿಯು $ಯ(ರ^2 - ವ^2) + ರ(ವ^2 - ಯ^2) + ವ(ಯ^2 - ರ^2)$ ಇರಬೇಕೆಂಬುದನ್ನು ಹೇಳಲು ಬರುವದು.

**೩.೧೪.** ಗುಣಪೃಥಕ್ಕರಣಕ್ಕಾಗಿ ಕೊಟ್ಟ ಚಕ್ರೀಯ ರಾಶಿಗಳ ಗುಣಪೃಥಕ್ಕರಣವನ್ನು ಎರಡು ರೀತಿಯಿಂದ ಮಾಡಲು ಬರುವದು. ಅದರ ವಿವೇಚನೆಯನ್ನು ಮುಂದಿನ ಉದಾಹರಣೆಗಳಲ್ಲಿ ಮಾಡಿದೆ.

**ಉ. ೧.** $ಪ^2(ಬ - ಮ) + ಬ^2(ಮ - ಪ) + ಮ^2(ಪ - ಬ)$ ಇದರ ಗುಣಪೃಥಕ್ಕರಣವನ್ನು ಮಾಡಿರಿ.

**೧ನೇ ರೀತಿ:**— ಮೊದಲು ರಾಶಿಯನ್ನು ಅವಶ್ಯವಿದ್ದಲ್ಲಿ ಮೂಲ ಕಂಸವನ್ನು ತೆಗೆದುಹಾಕಿ ಯಾವದಾದರೊಂದು ವರ್ಣದ ಘಾತಗಳ ಏರಿಕೆಯ ಇಲ್ಲವೆ ಇಳಿತದ ಕ್ರಮದಲ್ಲಿ ಬರೆಯಬೇಕು. ಹೀಗೆ ಮಾಡಿದರೆ ಅವಯವಗಳನು ತೆಗೆಯುವದು ಸುಲಭವಾಗುತ್ತದೆ.

ರಾಶಿಯು $= ಪ^{೨}(ಬ-ಮ) + ಬ^{೨}ಮ - ಪಬ^{೨} + ಮ^{೨}ಪ - ಬಮ^{೨}$

$= ಪ^{೨}(ಬ-ಮ) - ಪ(ಬ^{೨}-ಮ^{೨}) + ಬಮ(ಬ-ಮ)$

$= (ಬ-ಮ)\{ಪ^{೨} - ಪ(ಬ+ಮ) + ಬಮ\}$

$= (ಬ-ಮ)(ಪ^{೨} - ಪಬ - ಪಮ + ಬಮ)$

$= (ಬ-ಮ)\{ಪ(ಪ-ಬ) - ಮ(ಪ-ಬ)\}$

$= (ಬ-ಮ)(ಪ-ಬ)(ಪ-ಮ)$

$= -(ಪ-ಬ)(ಬ-ಮ)(ಮ-ಪ) \quad [\because ಪ-ಮ = -(ಮ-ಪ)]$

ಅವಯವಗಳನ್ನು ಚಕ್ರೀಯ ಕ್ರಮದಲ್ಲಿ ಮಂಡಿಸುವದು ಒಳ್ಳೆಯದು ಮತ್ತು ಅವುಗಳನ್ನು ಇಲ್ಲಿ ಹಾಗೆ ಬರೆದಿದೆ.

**೨ನೇ ರೀತಿ:**— ರಾಶಿಯಲ್ಲಿ ಪ ದ ಬದಲಾಗಿ ಬ ಇಟ್ಟರೆ ಆದರ ಬೆಲೆಯು ಶೂನ್ಯ ಬರುತ್ತದೆಂದು ತೋರುತ್ತದೆ. ಸಹಜವಾಗಿಯೇ ಗುಣಕ ಸಿದ್ಧಾಂತದಂತೆ ಪ—ಬ ಇದೊಂದು ಅವಯವವಿದೆ ಎಂದು ನಿಶ್ಚಿತವಾಗುತ್ತದೆ. ಅದರಂತೆಯೇ ಬ ದ ಬದಲಾಗಿ ಮ ಹಿಡಿದರೂ ರಾಶಿಯ ಬೆಲೆಯು ಶೂನ್ಯ ಬರುವದು. ಆದುದರಿಂದ ಬ—ಮ ಮತ್ತು ಮ—ಪ ಇವಾದರೂ ಅವಯವಗಳಿರುವವು. ಮತ್ತು ಇದು ಸಹಜವಿದೆ. ರಾಶಿಯು ಚಕ್ರೀಯ ಇದ್ದುದರಿಂದ ಒಂದು ಅವಯವವು ಪ—ಬ ಇದ್ದರೆ ಎರಡನೆಯದು ಬ—ಮ ಮತ್ತು ಮೂರನೆಯದು ಮ—ಪ ಇರಲೇಬೇಕು. ಈಗ ರಾಶಿಯು ಚಕ್ರೀಯ ಇದ್ದುದರಿಂದ ವರ್ಣಾತ್ಮಕ ಬೇರೆ ಗುಣಕವು ಇರಲಾರದು, ಆದರೆ ಸಂಖ್ಯಾತ್ಮಕ ಗುಣಕವಿರಬಹುದು. ಅದು ಅ ಇದೆಯೆಂದು ತಿಳಿದರೆ,

$ಪ^{೨}(ಬ-ಮ) + ಬ^{೨}(ಮ-ಪ) + ಮ^{೨}(ಪ-ಬ)$

$\equiv ಅ(ಪ-ಬ)(ಬ-ಮ)(ಮ-ಪ)$ ಇದು ನಿತ್ಯ ಸಮೀಕರಣವು ಇದ್ದುದರಿಂದ ಪ, ಬ, ಮ ಇವುಗಳ ಯಾವುದೇ ಬೆಲೆಗಳಿಗೂ ನಿಜ ಇರುವದು.

$ಪ=೦, ಬ=೧, ಮ=೨$ ಎಂದು ಹಿಡಿದರೆ $೦ + ೧(೨-೦) + ೪(೦-೧) = ಅ(೦-೧)(೧-೨)(೨-೦)$

$\therefore ೨-೪ = ೨ಅ$, ಅಂದರೆ $೨ಅ = -೨, \therefore ಅ = -೧$

$\therefore ಪ^{೨}(ಬ-ಮ) + ಬ^{೨}(ಮ-ಪ) + ಮ^{೨}(ಪ-ಬ) \equiv$

$-(ಪ-ಬ)(ಬ-ಮ)(ಮ-ಪ).$

**ಉ. ೨.** ಪಬ(ಪ$^{೨}$—ಬ$^{೨}$)+ಬಮ(ಬ$^{೨}$—ಮ$^{೨}$)+ಮಪ(ಮ$^{೨}$—ಪ$^{೨}$). ಇದರ ಅವಯವಗಳನ್ನು ತೆಗೆಯಿರಿ.

**೧ನೇ ರೀತಿ:-**

ರಾಶಿಯು = ಪ$^{೩}$ಬ—ಪಬ$^{೩}$+ಬಮ(ಬ$^{೨}$—ಮ$^{೨}$)+ಮ$^{೩}$ಪ—ಮಪ$^{೩}$

= ಪ$^{೩}$ಬ—ಮಪ$^{೩}$—ಪಬ$^{೩}$+ಮ$^{೩}$ಪ+ಬಮ(ಬ$^{೨}$—ಮ$^{೨}$)

= ಪ$^{೩}$(ಬ—ಮ)—ಪ(ಬ$^{೩}$—ಮ$^{೩}$)+ಬಮ(ಬ$^{೨}$—ಮ$^{೨}$)

= (ಬ—ಮ){ಪ$^{೩}$—ಪ(ಬ$^{೨}$+ಬಮ+ಮ$^{೨}$)+ಬಮ(ಬ+ಮ)}

= (ಬ-ಮ)(ಪ$^{೩}$-ಪಬ$^{೨}$-ಪಬಮ-ಪಮ$^{೨}$+ಬ$^{೨}$ಮ+ಬಮ$^{೨}$)

= (ಬ-ಮ)(ಬ$^{೨}$ಮ-ಪಬ$^{೨}$+ಬಮ$^{೨}$-ಪಬಮ—ಪಮ$^{೨}$+ಪ$^{೩}$)

= (ಬ—ಮ){ಬ$^{೨}$(ಮ—ಪ)+ಬಮ(ಮ—ಪ)— ಪ(ಮ$^{೨}$—ಪ$^{೨}$)}

= (ಬ—ಮ)(ಮ—ಪ{ಬ$^{೨}$+ಬಮ—ಪ(ಮ+ಪ)}

= (ಬ—ಮ)(ಮ—ಪ)(ಬ$^{೨}$—ಪ$^{೨}$+ಬಮ—ಪಮ)

= (ಬ—ಮ)(ಮ—ಪ{(ಬ+ಪ)(ಬ—ಪ)+ಮ(ಬ—ಪ)}

= (ಬ—ಮ)(ಮ—ಪ)(ಬ—ಪ)(ಬ+ಪ+ಮ)

= —(ಪ—ಬ)(ಬ—ಮ(ಮ—ಪ)(ಪ+ಬ+ಮ)

[∵ ಬ—ಪ = —(ಪ—ಬ)

* ಮೊದಲು ರಾಶಿಯನ್ನು ಪ ದ ಇಳಿತದ ಘಾತಕ್ರಮದಲ್ಲಿ ಮಂಡಿಸಿ ಬ—ಮ ಈ ಅವಯವ ದೊರೆತ ಕೂಡಲೇ ಎರಡನೇ ಕಂಸಿನಲ್ಲಿಯ ಪದಗಳನ್ನು ಪ ದ ಹೊರತೂ ಬೇರೆ ಯಾವುದಾದರೂ ವರ್ಣದ ಘಾತಕ್ರಮದಲ್ಲಿ ಮಾಡುವದು ಅವಶ್ಯವು. ಆದರಂತೆ ಇಲ್ಲಿ ಬ,ದ ಘಾತಕ್ರಮದಲ್ಲಿ ಮಾಡಿದೆ.

**೨ನೇ ರೀತಿ:—** ರಾಶಿಯಲ್ಲಿ ಪ=ಬ, ಬ=ಮ ಇಲ್ಲವೆ ಮ=ಪ ಎಂದು ಇಟ್ಟರೆ ಅದರ ಬೆಲೆಯು ಶೂನ್ಯ ಬರುವದು. ಆದುದರಿಂದ ಪ—ಮ, ಬ—ಮ ಮತ್ತು ಮ—ಪ ಈ ಅವಯವಗಳು ಇದ್ದಿರಬೇಕು. ಈಗ ರಾಶಿಯು ಚತುಷ್ಕೋಟಿಕ ಇರುವದು. ಮತ್ತು ಈ ಪ್ರತಿಯೊಂದು ಅವಯವವು ಏಕಕೋಟಿಕವಿರುವದು, ಆದುದರಿಂದ ಪ, ಬ, ಮ ಇವುಗಳಲ್ಲಿ ಚಕ್ರೀಯ-ವಿರುವ ಇನ್ನೊಂದು ಏಕಕೋಟಿಕ ಗುಣಕವು ಇದ್ದಿರಬೇಕು. ಈಗ ಇಂಥ

ಗುಣಕವು ಪ+ಬ+ಮ ಇದು ಒಂದೇ ಇರುವದು. ಈಗ ಇದರ ಹೊರತೂ ಬೇರೆ ಯಾವುದಾದರೊಂದು ಸಂಖ್ಯಾತ್ಮಕ ಗುಣಕವೂ ಇರಬಹುದು. ಅದು ಕ ಇದೆಯೆಂದು ತಿಳಿದರೆ

$$ಪಬ(ಪ^{೨}-ಬ^{೨})+ಬಮ(ಬ^{೨}-ಮ^{೨})+ಮಪ(ಮ^{೨}-ಪ^{೨})$$
$$= ಕ(ಪ-ಬ)(ಬ-ಮ)(ಮ-ಪ)(ಪ+ಬ+ಮ)$$

ಈ ನಿತ್ಯ ಸಮೀಕರಣವು ಪ, ಬ, ಮ ಇವುಗಳ ಯಾವುದೇ ಬೆಲೆಗೂ ನಿಜವಿರುವದು. ಪ=೦, ಬ=೧, ಮ=೨ ಎಂದು ಹಿಡಿದರೆ $೦+೧\cdot೨(೧-೪)+೦=ಕ(-೧)(೧-೨)(೨)(೧+೨)$

$\therefore -೬=೬ಕ;$ ಅಂತೆ $ಕ=-೧.$

$$\therefore ಪಬ(ಪ^{೨}-ಬ^{೨})+ಬಮ(ಬ^{೨}-ಮ^{೨})+ಮಪ(ಮ^{೨}-ಪ^{೨})$$
$$= -(ಪ-ಬ)(ಬ-ಮ)(ಮ-ಪ)(ಪ+ಬ+ಮ).$$

**ಉ.೩.** $ಯ^{೨}(ರ-ಲ)^{೩}+ರ^{೨}(ಲ-ಯ)^{೩}+ಲ^{೨}(ಯ-ರ)^{೩}$ ಇದರ ಅವಯವಗಳನ್ನು ಹೇಳಿರಿ.

$$ರಾಶಿಯು = ಯ^{೨}(ರ-ಲ^{೩})+ರ^{೨}(ಲ^{೩}-೩ಲ^{೨}ಯ+೩ಲಯ^{೨}-ಯ^{೩})$$
$$+ಲ^{೨}(ಯ^{೩}-೩ಯ^{೨}ರ+೩ಯರ^{೨}-ರ^{೩})$$
$$= -ಯ^{೩}(ರ^{೨}-ಲ^{೨})+ಯ^{೨}(ರ-ಲ)^{೩}+$$
$$೩ಯ^{೨}ರಲ(ರ-ಲ)-ರ^{೨}ಲ^{೨}(ರ-ಲ)$$
$$= (ರ-ಲ)\{-ಯ^{೩}(ರ+ಲ)+ಯ^{೨}(ರ-ಲ)^{೨}+$$
$$೩ಯ^{೨}ರಲ-ರ^{೨}ಲ^{೨}\}$$
$$= (ರ-ಲ)\{-ಯ^{೩}ರ-ಯ^{೩}ಲ+ಯ^{೨}(ರ^{೨}-೨ರಲ+ಲ^{೨}$$
$$+೩ಯ^{೨}ರಲ-ರ^{೨}ಲ^{೨}\}$$
$$= (ರ-ಲ)\{-ರ^{೨}(ಲ^{೨}-ಯ^{೨})+ಯ^{೨}ರ(ಲ-ಯ)+$$
$$ಯ^{೨}ಲ(ಲ-ಯ)\}$$
$$= (ರ-ಲ)(ಲ-ಯ)\{-ರ^{೨}(ಲ+ಯ)+ಯ^{೨}ರ+ಯ^{೨}ಲ\}$$
$$= (ರ-ಲ)(ಲ-ಯ)\{ಲ(ಯ^{೨}-ರ^{೨})+ಯರ(ಯ-ರ)\} \quad *$$
$$= (ಯ-ರ)(ರ-ಲ)(ಲ-ಯ)\{ಲ(ಯ+ರ)+ಯರ\}$$
$$= (ಯ-ರ)(ರ-ಲ)(ಲ-ಯ)(ಯರ+ರಲ+ಲಯ).$$

* ಮೊದಲು ರಾಶಿಯನ್ನು ಇಳಿತದ ಘಾತಕ್ರಮದಲ್ಲಿ ಮಂಡಿಸಿ ರ - ಲ ಈ ಅವಯವವು ದೊರೆತ ಕೂಡಲೇ ಎರಡನೇ ಕಂಸಿನಲ್ಲಿಯ ಪದಗಳನ್ನು ರ ದ ಇಳಿತದ ಘಾತಕ್ರಮದಲ್ಲಿ ಮಂಡಿಸಿದೆ, ಮತ್ತು ಅದರಂತೆ ಮಾಡಿ ಲ — ಯ ಈ ಅವಯವವು ದೊರೆತಕೂಡಲೇ ಮುಂದಿನ ಕಂಸಿನಲ್ಲಿಯ ಪದಗಳನ್ನು ಲ ದ ಘಾತಕ್ರಮದಲ್ಲಿ ಮಾಡಿದೆ. ಮಂಡಿಸುವದಕ್ಕಾಗಿ ಒಮ್ಮೆ ಉಪಯೋಗಿಸಿದ ವರ್ಣವನ್ನು ತಿರುಗಿ ಉಪಯೋಗಿಸಿಲ್ಲ, ಎಂಬ ಸಂಗತಿಯನ್ನು ಲಕ್ಷ್ಯದಲ್ಲಿಡಬೇಕು. ಮೊದಲು ಯ ದ, ತರುವಾಯ ರ ದ, ಮತ್ತು ಕೊನೆಗೆ ಲ ದ ಘಾತಕ್ರಮದಲ್ಲಿ ಮಂಡಿಸಿದೆ.

ಎರಡನೆಯ ರೀತಿಯಿಂದ ಇದೇ ಗುಣಪೃಥಕ್ಕರಣವನ್ನು ಹೇಗೆ ಮಾಡಲು ಬರುತ್ತದೆಂಬುದನ್ನು ನೋಡುವಾ. ರಾಶಿಯಲ್ಲಿ ಯ = ರ, ಇಲ್ಲವೆ ರ = ಲ, ಇಲ್ಲವೆ ಲ = ಯ ಇಟ್ಟರೆ ರಾಶಿಯ ಬೆಲೆಯು ಶೂನ್ಯವಾಗುವದೆಂದು ಕಂಡುಬರುವದು. ಆದುದರಿಂದ ಯ — ರ, ರ — ಲ ಮತ್ತು ಲ — ಯ ಈ ಅವಯವಗಳಿರುತ್ತವೆಂದು ನಿಶ್ಚಿತವಾಗುತ್ತದೆ. ಪ್ರತಿಯೊಂದು ಈ ಅವಯವವು ಏಕಕೋಟಿಕವಿದ್ದು ರಾಶಿಯು ಪಂಚಕೋಟಿಕವಿರುತ್ತದೆ. ಆದುದರಿಂದ ಯ,ರ,ಲ ಗಳೊಳಗೆ ಇನ್ನೊಂದು ಚಕ್ರೀಯ ದ್ವಿಕೋಟಿಕ ಅವಯವವು ಇದಿರಬೇಕು. ಚಕ್ರೀಯ ದ್ವಿಕೋಟಿಕ ರಾಶಿಯ ಸರ್ವಸಾಮಾನ್ಯರೂಪವು ಅ(ಯ$^{೨}$ + ರ$^{೨}$ + ಲ$^{೨}$) + ಕ(ಯರ + ರಲ + ಲಯ) ಇದು ಇರುತ್ತದೆ.

ಆದುದರಿಂದ, ಯ$^{೨}$(ರ — ಲ)$^{೩}$ + ರ$^{೨}$(ಲ — ಯ)$^{೩}$ + ಲ$^{೨}$(ಯ — ರ)$^{೩}$ ≡ (ಯ — ರ)(ರ — ಲ)(ಲ — ಯ)

{ಅ(ಯ$^{೨}$ + ರ$^{೨}$ + ಲ$^{೨}$) + ಕ(ಯರ + ರಲ + ಲಯ)}.

ಇದು ನಿತ್ಯ ಸಮೀಕರಣವಿರುತ್ತದೆ. ಮತ್ತು ಅದು ಯ,ರ,ಲ ಗಳ ಯಾವುದೇ ಬೆಲೆಗಳಿಗೂ ನಿಜವಿರುವದು.

ಯ=೦, ರ=೧, ಲ=೨ ಎಂದು ಹಿಡಿದರೆ ೮ — ೪೨=(೫ಅ + ೨ಕ), ಮತ್ತು
ಯ= —೧, ರ=೦, ಲ=೧ ಹಿಡಿದರೆ—೧ — ೧ = ೨(೨ಅ — ಕ),
ಅಂ. ೨ಅ — ಕ = ೧. ∴ ಅ=೦, ಕ=೧.

∴ ಯ$^{೨}$(ರ — ಲ)$^{೩}$ + ರ$^{೨}$(ಲ — ಯ)$^{೩}$ ≡ (ಯ—ರ)(ರ — ಲ)(ಲ — ಯ)

(ಯರ + ರಲ + ಲಯ),

**ಉ. ೪.** ಪ$^{೨}$(ಬ + ಮ) + ಬ$^{೨}$(ಮ + ಪ) + ಮ$^{೨}$(ಪ + ಬ) + ೨ಪಬಮ ದ ಅವಯವಗಳನ್ನು ತೆಗೆಯಿರಿ.

ರಾಶಿಯು $= ಪ^{೨}(ಬ+ಮ)+ಪ(ಬ^{೨}-೨ಬಮ+ಮ^{೨})+ಬಮ(ಬ+ಮ)$

$= ಪ^{೨}(ಬ+ಮ)+ಪ(ಬ+ಮ)^{೨}+ಬಮ(ಬ+ಮ)$

$= (ಬ+ಮ)\{ಪ^{೨}+ಪ(ಬ+ಮ)+ಬಮ\}$

$= (ಬ+ಮ)\{ಪ(ಪ+ಬ)+ಮ(ಪ+ಬ)\}$

$= (ಪ+ಬ)(ಬ+ಮ)(ಮ+ಪ).$

ಇಲ್ಲವೆ $ಪ=-ಬ$, ಇಲ್ಲವೆ $ಬ=-ಮ$, ಇಲ್ಲವೆ $ಮ=-ಪ$ ಹಿಡಿದರೆ ರಾಶಿಯ ಬೆಲೆಯು ಶೂನ್ಯ ಬರುವದು. ಆದುದರಿಂದ $ಪ+ಬ$, $ಬ+ಮ$ ಮತ್ತು $ಮ+ಪ$ ಇವು ಗುಣಕಗಳು ಇರುತ್ತವೆ. ಈ ಪ್ರತಿಯೊಂದು ಗುಣಕವು ಏಕಕೋಟಿಕವಿದ್ದು ರಾಶಿಯು ತ್ರಿಕೋಟಿಕ ಇದ್ದುದರಿಂದ ಇನ್ನೂ ವರ್ಣಾತ್ಮಕ ಗುಣಕಗಳು ಇರುವದಿಲ್ಲ. ಸಂಖ್ಯಾತ್ಮಕ ಗುಣಕವು ಅ ಎಂದು ತಿಳಿದರೆ $ಪ^{೨}(ಬ+ಮ)+ಬ^{೨}(ಮ+ಪ)+ಮ^{೨}(ಪ+ಬ)\equiv ಅ(ಪ+ಬ)(ಬ+ಮ)(ಮ+ಪ)$ ಇದು ನಿತ್ಯ ಸಮೀಕರಣವಿದ್ದುದರಿಂದ ಪ, ಬ, ಮ ದ ಯಾವುದೇ ಬೆಲೆಗೂ ನಿಜವಿರುವದು. $ಪ=೦$, $ಬ=೧$ ಮತ್ತು $ಮ=೨$ ಎಂದು ಹಿಡಿದರೆ

$೨+೪=ಅ\times೧\times೩\times೨$ ಅಂ. $೬ಅ=೬$, ಅಂ. $ಅ=೧$. ಆದುದರಿಂದ

$$ಪ^{೨}(ಬ+ಮ)+ಬ^{೨}(ಮ+ಪ)+ಮ^{೨}(ಪ+ಬ)\equiv(ಪ+ಬ)(ಬ+ಮ)(ಮ+ಪ).$$

**ಉ.೫.** $(ಪ-ಬ)^{೩}+(ಬ-ಮ)^{೩}+(ಮ-ಪ)^{೩}$ ದ ಅವಯವಗಳನ್ನು ಹೇಳಿರಿ.

$ಪ=ಬ$, ಇಲ್ಲವೆ $ಬ=ಮ$, ಇಲ್ಲವೆ $ಮ=ಪ$ ಎಂದು ಹಿಡಿದರೆ ರಾಶಿಯು ಬೆಲೆಯು ಶೂನ್ಯವಾಗುವದರಿಂದ $ಪ-ಬ$, $ಬ-ಮ$, ಮತ್ತು $ಮ-ಪ$ ಇವು ಗುಣಕಗಳಿವೆ. ಈ ಮೂರು ಏಕ ಕೋಟಿಕ ಇದ್ದು ರಾಶಿಯು ತ್ರಿಕೋಟಿಕವಿದ್ದು-ದರಿಂದ ಇನ್ನಾವದೂ ವರ್ಣಾತ್ಮಕ ಗುಣಕವಿಲ್ಲ. ಸಂಖ್ಯಾತ್ಮಕ ಗುಣಕವು ಅ ಎಂದು ತಿಳಿದರೆ.

$(ಪ-ಬ)^{೩}+(ಬ-ಮ)^{೩}+(ಮ-ಪ)^{೩}$

$\equiv ಅ(ಪ-ಬ)(ಬ-ಮ)(ಮ-ಪ)$. ಇದು ನಿತ್ಯ ಸಮೀಕರಣವಿದೆ. ಆದುದರಿಂದ ಪ, ಬ, ಮ ದ ಯಾವುದೇ ಬೆಲೆಗೂ ನಿಜವಿರುವದು.

ಪ=೦, ಬ=೧, ಮ-೨ ಎಂದು ತಿಳಿದರೆ, −೧−೧+೮
=ಅ(−೧)(−೧)೨, ∴ಅ·೨=೬, ∴ಅ=೩.

∴ **(ಪ−ಬ)$^{೩}$+(ಬ−ಮ)$^{೩}$+(ಮ−ಪ)$^{೩}$≡೩(ಪ−ಬ)(ಬ−ಮ)(ಮ−ಪ).**

**ಉ.೬.** (ಪ+ಬ+ಮ)$^{೩}$−ಪ$^{೩}$−ಬ$^{೩}$−ಮ$^{೩}$ ಇದರ ಗುಣಪೃಥಕ್ಕರಣವನ್ನು ಮಾಡಿರಿ. ಪ=−ಬ, ಇಲ್ಲವೆ ಬ=−ಮ ಇಲ್ಲವೆ ಮ=−ಪ ಎಂದು ಹಿಡಿದರೆ ರಾಶಿಯು ಬೆಲೆಯು ಶೂನ್ಯವಾಗುತ್ತದೆ. ಆದುದರಿಂದ ಪ+ಬ, ಬ+ಮ, ಮತ್ತು ಮ+ಪ ಇವು ಅವಯವಗಳಿರುವವು. ಅವು ಏಕಕೋಟಿಕವಿದ್ದು ರಾಶಿಯು ತ್ರಿಕೋಟಿಕವಿರುವದು, ಆದುದರಿಂದ ಇನ್ನೂ ಯಾವ ವರ್ಣಾತ್ಮಕ ಗುಣಕಗಳು ಇರಲಾರವು. ಸಂಖ್ಯಾತ್ಮಕ ಗುಣಕವು ಅ ಎಂದು ತಿಳಿದರೆ

(ಪ+ಬ+ಮ)$^{೩}$−ಪ$^{೩}$−ಬ$^{೩}$−ಮ$^{೩}$≡ಅ(ಪ+ಬ)(ಬ+ಮ)(ಮ+ಪ). ಇದು ನಿತ್ಯ ಸಮೀಕರಣವಿರುವದರಿಂದ ಪ, ಬ, ಮ ದ ಯಾವುದೇ ಬೆಲೆಗೂ ನಿಜವಿರುವದು.

ಪ=೦, ಬ=೧, ಮ=೨ ಎಂದು ಹಿಡಿದರೆ, ೨೭−೧−೮=ಅ·೧.೩·೨,
∴ಅ·೬=೧೮, ∴ಅ=೩.

∴ **(ಪ+ಬ+ಮ)$^{೩}$−ಪ$^{೨}$−ಬ$^{೨}$−ಮ$^{೨}$≡೩(ಪ+ಬ)(ಬ+ಮ)(ಮ+ಪ).** ಹಿಂದೆ ಪು. ೨೫, ೨೬ ಗಳ ಮೇಲೆ **(ಪ+ಬ+ಮ)$^{೩}$=ಪ$^{೩}$+ಬ$^{೩}$+ಮ$^{೩}$+೩(ಪ+ಬ)(ಬ+ಮ)(ಮ+ಪ)** ಎಂದು ಸಿದ್ಧಮಾಡಲಾಗಿದೆ. ಅದರ ಮೇಲಿಂದ **ಪಕ್ಷಾಂತರದಿಂದ**

**(ಪ+ಬ+ಮ)$^{೩}$−ಪ$^{೩}$−ಬ$^{೩}$−ಮ$^{೩}$≡ ೩(ಪ+ಬ)(ಬ+ಮ)(ಮ+ಪ)** ಎಂದು ಸಿದ್ಧವಾಗುತ್ತದೆ.

**ಉ.೭.** ಪ$^{೨}$(ಬ+ಮ)+ಬ$^{೨}$(ಮ+ಪ)+ಮ$^{೨}$(ಪ+ಬ)+೩ಪಬಮ ಇದರ ಗುಣಕಗಳನ್ನು ಹೇಳಿರಿ.

ರಾಶಿಯು= ಪ$^{೨}$(ಬ+ಮ)+ಪಬಮ+ಬ$^{೨}$(ಮ+ಪ)+ಪಬಮ
+ಮ$^{೨}$(ಪ+ಬ)+ಪಬಮ

= ಪ{ಪ(ಬ + ಮ) + ಬಮ} +
ಬ{ಬ(ಮ + ಪ) + ಪಮ} + ಮ{ಮ(ಪ + ಬ) + ಪಬ}
= ಪ(ಪಬ + ಬಮ + ಮಪ) + ಬ(ಬಮ + ಬಪ + ಪಮ)
+ ಮ(ಮಪ + ಮಬ + ಪಬ)
= ಪ(ಪಬ + ಬಮ + ಮಪ) + ಬ(ಪಮ + ಬಮ + ಮಪ) +
ಮ(ಪಬ + ಬಮ + ಮಪ)[ಚಕ್ರೀಯ ಕ್ರಮದಲ್ಲಿಬರೆಯಲಾಗಿ]
= (ಪ + ಬ + ಮ)(ಪಬ + ಬಮ + ಮಪ).

ಮೇಲಿನ ೧—೭ ಈ ಉದಾಹರಣೆಗಳು ಬಹಳ ಮಹತ್ವವವು ಮತ್ತು ಉಪಯುಕ್ತವಿದ್ದುದರಿಂದ ಅವುಗಳನ್ನು ಮತ್ತು ಅವುಗಳಲ್ಲಿ ಉಪಯೋಗಿಸಿದ ರೀತಿಗಳನ್ನು ಲಕ್ಷ್ಯದಲ್ಲಿಡುವದು ಬಹಳ ಅವಶ್ಯವಿದೆ. ಯಾವಾಗಲೂ ಅವುಗಳ ಉಪಯೋಗ ಬಹಳ ಆಗುತ್ತದೆ.

## ಪ್ರಶ್ನಸಂಗ್ರಹ ೧೬.

ಗುಣಪೃಥಕ್ಕರಣವನ್ನು ಮಾಡಿರಿ.

೧. ಯರ(ಯ − ರ) + ರಲ(ರ − ಲ) + ಲಯ(ಲ − ಯ).

೨. ಪಬ(ಪ + ಬ) + ಬಮ(ಬ + ಮ) + ಮಪ(ಮ + ಪ) + ೨ಪಬಮ.

೩. ತ(ದ − ಸ$^{೨}$) + ದ(ಸ$^{೨}$ − ತ$^{೨}$) + ಸ(ತ$^{೨}$ − ದ$^{೨}$).

೪. ಯ$^{೨}$(ಪ − ಮ) + ಪ$^{೨}$(ಮ − ಯ) + ಮ$^{೨}$(ಯ − ಪ).

೫. ಯ(ರ + ಲ)$^{೨}$ + ರ(ಲ + ಯ)$^{೨}$ + ಲ(ಯ + ರ)$^{೨}$ − ೪ಯರಲ.

೬. (ಪ + ಬ + ಮ)(ಪಬ + ಬಮ + ಮಪ) − ಪಬಮ.

೭. ಪ(ಬ$^{೩}$ − ಮ$^{೩}$) + ಬ(ಮ$^{೩}$ − ಪ$^{೩}$) + ಮ(ಪ$^{೩}$ − ಬ$^{೩}$).

೮. ಪ(ಬ − ಮ)$^{೩}$ + ಬ(ಮ − ಪ)$^{೩}$ + ಮ(ಪ − ಬ)$^{೩}$.

೯. ಪ$^{೩}$(ಬ − ಮ) + ಬ$^{೩}$(ಮ − ಪ) + ಮ$^{೩}$(ಪ − ಬ).

೧೦. ಯ$^{೪}$(ರ − ಲ) + ರ$^{೪}$(ಲ − ಯ) + ಲ$^{೪}$(ಯ − ರ).

೧೧. (ಪ$^{೨}$ − ಬ$^{೨}$)(ಬ$^{೩}$ − ಮ$^{೩}$) + (ಮ$^{೨}$ − ಬ$^{೨}$)(ಪ$^{೩}$ − ಬ$^{೩}$).

೧೨. ಯ$^{೩}$(ರ − ಲ)$^{೩}$ + ರ$^{೩}$(ಲ − ಯ)$^{೩}$ + ಲ$^{೩}$(ಯ − ರ)$^{೩}$.

೧೩. (ಯ$^{೨}$ − ರ$^{೨}$)$^{೩}$ + (ರ$^{೨}$ − ಲ$^{೨}$)$^{೩}$ + (ಲ$^{೨}$ − ಯ$^{೨}$)$^{೩}$.

೧೪. (ಯ$^{೨}$ + ರ$^{೨}$)ಲ + (ಯ + ರ)(ಯರ + ಲ$^{೨}$) + ೩ಯರಲ.

೧೫. $ಯ+ರ$, $ರ+ಲ$, $ಲ+ಯ$,

ಇವುಗಳೊಳಗಿನ ಯಾವುದಾದರೊಂದು ದ್ವಿಪದಿಯು ಶೂನ್ಯವಿದ್ದರೆ $ಯ^{೨}(ರ+ಲ)+ರ^{೨}(ಲ+ಯ)+ಲ^{೨}(ಯ+ರ)+೨ಯರಲ$ ಈ ರಾಶಿಯು ಶೂನ್ಯವಿರುವದೆಂದು ಸಿದ್ಧ ಮಾಡಿರಿ.

## ನಾಲ್ಕನೆಯ ಪ್ರಕರಣ

## ಮ. ಸಾ. ವಿ. ಮತ್ತು ಲ. ಸಾ. ವಿ.

೪·೧. ಬಹಳ ಸುಲಭವಿರುವ ರಾಶಿಗಳ **ಮಹತ್ತಮ ಸಾಧಾರಣ ವಿಭಾಜಕ** ಮತ್ತು ಅದರಂತೆಯೇ **ಲಘುತಮ ಸಾಧಾರಣ ವಿಭಾಜ್ಯವನ್ನು** ಹೇಗೆ ತೆಗೆಯುವದು ಎಂಬುದನ್ನು ನಾವು ಎರಡನೆಯ ಭಾಗದಲ್ಲಿ ಎಂಟನೆಯ ಮತ್ತು ಒಂಭತ್ತನೆಯ ಪ್ರಕರಣಗಳಲ್ಲಿ (ಪು. ೧೬೫—೧೮೧) ನೋಡಿದ್ದೇವೆ. ಈಗ ಇಂದು ಉಜಳಣಿಯಿಂದ ಪ್ರಾರಂಭಮಾಡಿ ಅದೇ ವಿಷಯದಲ್ಲಿ ಸ್ವಲ್ಪ ಮುಂದಿನ ವಿಚಾರವನ್ನು ಮಾಡುವಾ.

### ೧.

### ಸ್ವಲ್ಪ ಉಜಳಣಿ

೪·೨. ಕೊಟ್ಟ ರಾಶಿಗೆ ಯಾವ ರಾಶಿಯಿಂದ ಭಾಗ ಹೋಗುವದೋ ಅದು ಕೊಟ್ಟ ರಾಶಿಯ **ವಿಭಾಜಕವು** ಮತ್ತು, ಕೊಟ್ಟ ರಾಶಿಯಿಂದ ಯಾವ ರಾಶಿಗೆ ನಿಃಶೇಷವಾಗಿ ಭಾಗ ಹೋಗುವದೋ ಅದು ಕೊಟ್ಟ ರಾಶಿಯ **ವಿಭಾಜ್ಯವು.** ಸಹಜವಾಗಿಯೇ **ವಿಭಾಜಕವಿದು** ಕೊಟ್ಟ ರಾಶಿಯ **ಗುಣವಿರುವದು**, ಮತ್ತು ಯಾವುದೇ ರಾಶಿಯು ಅದರ **ವಿಭಾಜ್ಯದ** ಗುಣವಿರುತ್ತದೆ.

೪·೩. ಅಯ ಕ್ಕೆ ಯ ದಿಂದ ಭಾಗ ಹೋಗುತ್ತದೆ. ಆದುದರಿಂದ ಅದು ಅಯ ದ **ವಿಭಾಜಕವಿರುತ್ತದೆ.** ಮತ್ತು, ಅದರಿಂದ ಕಯ ಕ್ಕೆ ಭಾಗಹೋಗುತ್ತದೆ. ಆದುದರಿಂದ ಅದು ಕಯ ದ್ದಾದರೂ **ವಿಭಾಜಕವಿರುತ್ತದೆ.** ಮತ್ತು ಅದರಿಂದ ಎರಡಕ್ಕೂ ಭಾಗಹೋಗುವದರಿಂದ ಅದು ಎರಡರ **ಸಾಧಾರಣ ವಿಭಾಜಕ**ವಿರುತ್ತದೆ.

ಅಪಯ ಮತ್ತು ಕಪಯ ಈ ರಾಶಿಗಳಲ್ಲಿ ಯ ಇದು **ಸಾಧಾರಣ ಗುಣವಿರುವದು,** ಪ ಇದು **ಸಾಧಾರಣ ಗುಣ**ವಿರುವದು ಮತ್ತು ಪಯ ವಾದರೂ **ಸಾಧಾರಣ ಗುಣ**ವಿರುವದು. ಆದರೆ ಈ ಮೂರೂ **ಸಾಧಾರಣ ಗುಣ**ಗಳಲ್ಲಿ ( ಅಂದರೆ **ವಿಭಾಜಕಗಳಲ್ಲಿ** ) ಪಯ ಇದು ಎಲ್ಲವುಗಳಲ್ಲಿ ದೊಡ್ಡದಿರುತ್ತದೆ. ಆದುದರಿಂದ ಅದು **ಅಪಯ** ಮತ್ತು **ಕಪಯ** ಈ ರಾಶಿಗಳ **ಮ. ಸಾ. ವಿ.** (**ಮಹತ್ತಮ ಸಾಧಾರಣ ವಿಭಾಜಕ**)ಇರುತ್ತದೆ.

**೪·೪.** ಅಕಯ ಈ ರಾಶಿಗೆ ಅಯ ದಿಂದ ಭಾಗಹೋಗುತ್ತದೆ. ಆದುದರಿಂದ ಅದು ಅಯ ದ **ವಿಭಾಜ್ಯವಿರುವದು,** ಮತ್ತು ಕಯ ದಿಂದ ಭಾಗಹೋಗುತ್ತದೆ. ಆದುದರಿಂದ ಅದು ಕಯ ದ್ದಾದರೂ **ವಿಭಾಜ್ಯವಿರುವದು,** ಮತ್ತು ಅದಕ್ಕೆ ಅಯ ಮತ್ತು ಕಯ ಈ ಎರಡರಿಂದಲೂ ಭಾಗಹೋಗುತ್ತದೆಂದು ಅದು ಎರಡರ **ಸಾಧಾರಣ ವಿಭಾಜ್ಯ**ವಿರುವದು.

ಅಪಯ ಮತ್ತು ಕಪಯ ಈ ರಾಶಿಗಳೊಳಗಿನ ಪ್ರತಿಯೊಂದರಿಂದ ಅಕಪಯ ಕ್ಕೆ ಭಾಗಹೋಗುವದು. ಆದುದರಿಂದ ಅಕಪಯ ಇದು ಅವುಗಳ **ಸಾಧಾರಣ** ವಿಭಾಜ್ಯವಿರುವದು. ಆದರೆ ಅಪಯ ಮತ್ತು ಕಪಯ ಇವು-ಗಳಿಂದ ಅಕಪಯ ಕ್ಕೆ ಹೇಗೆ ಭಾಗಹೋಗುತ್ತದೆಯೋ ಅದರಂತೆಯೇ ಅವು-ಗಳಿಂದ ೨ ಅಕಪಯ, ೩ ಅಕಪಯ, ೪ ಅಕಪಯ, ನಅಕಪಯ, ಸ್ವಲ್ಪದರಲ್ಲಿ ಹೇಳುವದೆಂದರೆ ಅಕಪಯ ದ ಯಾವುದೇ ಪಟ್ಟಿಗೆ ಭಾಗಹೋಗುತ್ತದೆ, ಅಂದರೆ ಅಕಪಯ ಮತ್ತು ಅದರಂತೆ ಅದರ ಯಾವುದೇ ಪಟ್ಟು ಇರುವಂಥ ರಾಶಿಯು ಅಪಯ ಮತ್ತು ಕಪಯ ಇವುಗಳ **ಸಾಧಾರಣ ವಿಭಾಜ್ಯ**ವಿರುತ್ತದೆ. ಈ ವಿಧವಾಗಿ ಅನಂತ ಸಾಧಾರಣ ವಿಭಾಜ್ಯಗಳು ಸಂಭವಿಸುತ್ತವೆ. ಆದರೆ **ಅಕಪಯ** ಇದು ಎಲ್ಲವುಗಳಲ್ಲಿ ಸಣ್ಣದು, ಆದುದರಿಂದ ಅದು **ಅಪಯ** ಮತ್ತು **ಕಪಯ** ಇವುಗಳ **ಲ. ಸಾ. ವಿ.(ಲಘುತಮ ಸಾಧಾರಣ ವಿಭಾಜ್ಯ) .**

**೪·೫. ಮಹತ್ತಮ ಸಾಧಾರಣ ವಿಭಾಜಕ** ಮತ್ತು **ಲಘುತಮ ಸಾಧಾರಣ ವಿಭಾಜ್ಯ** ಇವುಗಳಿಗೆ ಅನುಕ್ರಮವಾಗಿ **ಮಹತ್ತಮ ಅಪವರ್ತಕ** ಮತ್ತು **ಲಘುತಮ ಅಪವರ್ತ್ಯ** ಎಂದು ಸಂಜ್ಞೆಗಳಿವೆ. **ಅಪವರ್ತಕ ಅಂ. ಸಾಧಾರಣ ವಿಭಾಜಕ** ಮತ್ತು **ಅಪವರ್ತ್ಯ** ಅಂ. **ಸಾಧಾರಣ ವಿಭಾಜ್ಯ.**

೪·೬. ಏಕಪದ ರಾಶಿಗಳ ಗುಣಕಗಳು ಸ್ಪಷ್ಟವಾಗಿ ಕಾಣುತ್ತವೆ. ಆದುದರಿಂದ ಕೊಟ್ಟ ಎರಡು ಇಲ್ಲವೆ ಹೆಚ್ಚು ರಾಶಿಗಳಲ್ಲಿ ಸಾಧಾರಣ ಗುಣಗಳು ಯಾವವು ಮತ್ತು ಆ ಎಲ್ಲ ಸಾಧಾರಣ ಗುಣಗಳಲ್ಲಿ **ಮಹತ್ತಮ** ಯಾವುದು ಎಂಬುದನ್ನು, ಮತ್ತು ಅದರಂತೆಯೇ ಆ ರಾಶಿಗಳಿಂದ ಯಾವ ರಾಶಿಗಳಿಗೆ ಭಾಗಹೋಗುವವದೋ ಅವುಗಳಲ್ಲಿ **ಲಘುತಮ** ಯಾವುದು ಎಂಬುದನ್ನು, ಅವುಗಳ ಕಡೆಗೆ ನೋಡಿದೊಡನೆಯೇ ಹೇಳಲು ಬರುವದು. ಇಲ್ಲಿ ಕೇವಲ ನೋಡುವದರಿಂದ ನಾವು **ಮ. ಸಾ. ವಿ.** ಮತ್ತು **ಲ. ಸಾ. ವಿ.** ಗಳನ್ನು ಹೇಳುತ್ತೇವೆ, ಉದಾಹರಣೆಗಾಗಿ,

$೩೦ಅ^{೪}ಕ^{೩}ಯ$ ಮತ್ತು $೨೪ಅ^{೩}ಕ^{೫}ಯ^{೩}$ ಈ ರಾಶಿಗಳಲ್ಲಿ $ಅ^{೩}$, $ಕ^{೩}$ ಮತ್ತು ಯ ಇವು ಅನುಕ್ರಮವಾಗಿ ಅ, ಕ ಮತ್ತು ಯ ಗಳ ಸಾಧಾರಣ ಘಾತಗಳಲ್ಲಿಯ ಎಲ್ಲಕ್ಕೂ ದೊಡ್ಡ ಘಾತಗಳು, ಮತ್ತು ೬ ಇದು ೩೦ ಮತ್ತು ೨೪ ಈ ಸಂಖ್ಯೆಗಳೊಳಗಿನ ಎಲ್ಲಕ್ಕೂ ದೊಡ್ಡದಾದ ಸಾಧಾರಣ ಗುಣಕವು. ಆದುದರಿಂದ $೬ಅ^{೩}ಕ^{೩}ಯ$ ಇದು **ಮ. ಸಾ. ವಿ.** ಅದರಂತೆಯೇ $ಅ^{೪}$, $ಕ^{೫}$ ಮತ್ತು $ಯ^{೩}$ ಇವು ಅ, ಕ ಮತ್ತು ಯ ಗಳ ಎಲ್ಲಕ್ಕೂ ದೊಡ್ಡ ಘಾತಗಳು, ಮತ್ತು ೧೨೦ ಇದು ೩೦ ಮತ್ತು ೨೪ ರಿಂದ ಭಾಗಹೋಗುವ ಎಲ್ಲಕ್ಕೂ ಸಣ್ಣ ಸಂಖ್ಯೆಯು, ಆದುದರಿಂದ $೧೨೦ಅ^{೪}ಕ^{೫}ಯ^{೩}$ ಇದು **ಲ. ಸಾ. ವಿ.**

$೯ಅ^{೪}ಪಕ್ಷ^{೩}$, $೧೨ಅ^{೩}ಯ^{೫}ಕ್ಷ^{೪}$ ಮತ್ತು $೧೮ಅ^{೩}ಪ^{೩}ಯ^{೩}ಕ್ಷ^{೫}$ ಈ ರಾಶಿಗಳಲ್ಲಿ, $ಅ^{೩}$ ಇದು ಅವರ ಎಲ್ಲ ಸಾಧಾರಣ ಘಾತಗಳಲ್ಲಿ ದೊಡ್ಡದು, ಪ ಮೊದಲನೇ ಮತ್ತು ಕೊನೆಯ ರಾಶಿಗಳಲ್ಲಿ ಇವೆ. ಆದರೆ ಎರಡನೇ ರಾಶಿಯಲ್ಲಿ ಇಲ್ಲ, ಆದುದರಿಂದ ಅದು ಸಾಧಾರಣವಲ್ಲ, ಯ ಕೊನೆಯ ಎರಡು ರಾಶಿಗಳಲ್ಲಿ ಇವೆ, ಆದರೆ ಮೊದಲನೆಯದರಲ್ಲಿ ಇಲ್ಲ, ಆದುದರಿಂದ ಅದು ಸಾಧಾರಣವಲ್ಲ, $ಕ್ಷ^{೩}$ ಇದು ಕ್ಷ ದ ಎಲ್ಲ ಸಾಧಾರಣ ಘಾತಗಳಲ್ಲಿ ದೊಡ್ಡದು, ಮತ್ತು ೯, ೧೨ ಮತ್ತು ೧೮ ಇವುಗಳಲ್ಲಿ ಎಲ್ಲಕ್ಕೂ ದೊಡ್ಡ ಸಾಧಾರಣ ಗುಣಕವು ೩, ಆದುದರಿಂದ $೩ಅ^{೩}ಕ್ಷ^{೩}$ ಇದು **ಮ. ಸಾ. ವಿ.** ಅದರಂತೆಯೇ $ಅ^{೪}$, $ಪ^{೩}$, $ಯ^{೫}$ ಮತ್ತು $ಕ್ಷ^{೫}$ ಇವು ಅ, ಪ, ಯ ಮತ್ತು ಕ್ಷ ಗಳ ಎಲ್ಲಕ್ಕೂ ದೊಡ್ಡ ಘಾತಗಳು, ಮತ್ತು ೩೬ ಇದು ೯, ೧೨ ಮತ್ತು ೧೮ ರಿಂದ ಭಾಗ ಹೋಗುವ ಎಲ್ಲಕ್ಕೂ ಸಣ್ಣ ಸಂಖ್ಯೆಯು ಇದ್ದುದರಿಂದ $೩೬ಅ^{೪}ಪ^{೩}ಯ^{೫}ಕ್ಷ^{೫}$ ಇದು **ಲ. ಸಾ. ವಿ.**

ಉ.೧. $ಪ+೪-\frac{೪}{ಪ+೪}$ ಇದಕ್ಕೆ $೧+\frac{೨}{ಪ+೨}$ ರಿಂದ ಗುಣಿಸಿರಿ.

$$\left(ಪ+೪-\frac{೪}{ಪ+೪}\right)\left(೧+\frac{೨}{ಪ+೨}\right)$$

$$=\frac{(ಪ+೪)^{೨}-೪}{ಪ+೪}\times\frac{ಪ+೨+೨}{ಪ+೨}$$

$$=\frac{ಪ^{೨}+೮ಪ+೧೨}{ಪ+೪}\times\frac{ಪ+೪}{ಪ+೨}$$

$$=\frac{(ಪ+೨)(ಪ+೬)}{ಪ+೪}\times\frac{ಪ+೪}{ಪ+೨}$$

$$=ಪ+೬.$$

ಉ. ೨. $ರ-೩+\frac{೨೨ರ+೧೪}{ರ^{೨}+೯ರ+೮}$ ಇದಕ್ಕೆ

$ರ-೧+\frac{೧೮}{ರ+೮}$ ರಿಂದ ಭಾಗಿಸಿರಿ.

$$\left(ರ-೩+\frac{೨೨ರ+೧೪}{ರ^{೨}+೯ರ+೮}\right)\div\left(ರ-೧+\frac{೧೮}{ರ+೮}\right)$$

$$=\frac{(ರ-೩)(ರ^{೨}+೯ರ+೮)+೨೨ರ+೧೪}{ರ^{೨}+೯ರ+೮}\div\frac{(ರ-೧)(ರ+೮)+೧೮}{ರ+೮}$$

$$=\frac{ರ^{೩}+೬ರ^{೨}-೧೯ರ-೨೪+೨೨ರ+೧೪}{ರ^{೨}+೯ರ+೮}\div\frac{ರ^{೨}+೭ರ-೮+೧೮}{ರ+೮}$$

$$=\frac{ರ^{೩}+೬ರ^{೨}+೩ರ-೧೦}{ರ+೯ರ+೮}\div\frac{ರ^{೨}+೭ರ+೧೦}{ರ+೮}$$

$$= \frac{(ರ-೧)(ರ+೨)(ರ+೫)}{(ರ+೧)(ರ+೪)} \times \frac{ರ+೪}{(ರ+೨)(ರ+೫)}$$

$$= \frac{ರ-೧}{ರ+೧}.$$

ಉ. ೩. $\frac{ನ+೪}{ನ+೨} + \frac{೨ನ+೧೧}{ನ+೪} - \frac{೩ನ+೧೪}{ನ+೩}$ ಈ ರಾಶಿಗೆ ಸರಳ ರೂಪವನ್ನು ಕೊಡಿರಿ.

$$\frac{ನ+೪}{ನ+೨} + \frac{೨ನ+೧೧}{ನ+೪} - \frac{೩ನ+೧೪}{ನ+೩}$$

$$= \left(೧+\frac{೨}{ನ+೨}\right) + \left(೨+\frac{೩}{ನ+೪}\right) - \left(೩+\frac{೫}{ನ+೩}\right) \quad \ldots \quad (೧)$$

$$= \frac{೨}{ನ+೨} + \frac{೩}{ನ+೪} - \frac{೫}{ನ+೩} \quad \ldots \quad \ldots \quad \ldots \quad (೨)$$

$$= \frac{೨(ನ+೪)(ನ+೩)+೩(ನ+೨)(ನ+೩)-೫(ನ+೪)(ನ+೨)}{(ನ+೨)(ನ+೩)(ನ+೪)} \quad (೩)$$

$$= \frac{೨(ನ^೨+೭ನ+೧೨)+೩(ನ^೨+೫ನ+೬)-೫(ನ^೨+೬ನ+೮)}{(ನ+೨)(ನ+೩)(ನ+೪)} \quad (೪)$$

$$= \frac{೨ನ^೨+೧೪ನ+೨೪+೩ನ^೨+೧೫ನ+೧೮-೫ನ^೨-೩೦ನ-೪೦}{(ನ+೨)(ನ+೩)(ನ+೪)} \quad (೫)$$

$$= \frac{೨-ನ}{(ನ+೨)(ನ+೩)(ನ+೪)} \quad \ldots \quad \ldots \quad \ldots \quad (೬)$$

ಉ. ೪. $\frac{ಯ^೨}{ಯ+೧} - \frac{೨ಯ^೨+೪ಯ+೨}{ಯ+೨} + \frac{ಯ^೨+೪ಯ+೪}{ಯ+೩}$

ರಳ ರೂಪವನ್ನು ಕೊಡಿರಿ.

$$\frac{೨ಯ^೨+೪ಯ-೨}{ಯ+೨} + \frac{ಯ^೨+೪ಯ+೪}{ಯ+೩}$$

$$= \frac{ಯ^೨-೧+೧}{ಯ+೧} - \frac{೨ಯ(ಯ+೨)+೨}{ಯ+೨} + \frac{ಯ^೨+೪ಯ+೩+೧}{ಯ+೩} \quad \ldots \quad \ldots \quad \ldots \quad (೧)$$

$$= \frac{(ಯ-೧)(ಯ+೧)+೧}{ಯ+೧} - \frac{೨ಯ(ಯ+೨)+೨}{ಯ+೨} + \frac{(ಯ+೧)(ಯ+೩)+೧}{ಯ+೩} \quad \ldots \quad \ldots \quad (೨)$$

$$= ಯ-೧+\frac{೧}{ಯ+೧} - ೨ಯ - \frac{೨}{ಯ+೨} + ಯ+೧+\frac{೧}{ಯ+೩} \quad \ldots \quad \ldots \quad (೩)$$

$$= \frac{೧}{ಯ+೧} - \frac{೨}{ಯ+೨} + \frac{೧}{ಯ+೩} \quad \ldots \quad (೪)$$

$$= \frac{(ಯ+೨)(ಯ+೩)-೨(ಯ+೧)(ಯ+೩)+(ಯ+೧)(ಯ+೨)}{(ಯ+೧)(ಯ+೨)(ಯ+೩)} \quad (೫)$$

$$= \frac{(ಯ^೨+೫ಯ+೬)-೨(ಯ^೨+೪ಯ+೩)+ಯ^೨+೩ಯ+೨}{(ಯ+೧)(ಯ+೨)(ಯ+೩)} \quad \ldots \quad (೬)$$

$$= \frac{೨}{(ಯ+೧)(ಯ+೨)(ಯ+೩)} \quad \ldots \quad \ldots \quad \ldots \quad (೭)$$

ಮೇಲಿನ ಎರಡು ಉದಾಹರಣೆಗಳಲ್ಲಿ ಕೊಟ್ಟ ರಾಶಿಗಳಲ್ಲಿಯ ಅಪೂರ್ಣಾಂಕಗಳಿಗೆ ಭಾಗಾನುಬಂಧ ಪೂರ್ಣಾಂಕಗಳ ರೂಪವನ್ನು ಕೊಟ್ಟಿದ್ದರಿಂದ ಉದಾಹರಣೆಗಳನ್ನು ಬಿಡಿಸುವದು ಬಹಳ ಸುಲಭವಾಗಿದೆ. ಹಾಗೆ ಮಾಡದೆ ಇದ್ದರೆ ಕೃತಿಯು ಸ್ವಲ್ಪ ಬೆಳೆಯುತ್ತಿತ್ತು ಮತ್ತು ಕ್ಲಿಷ್ಟವಾಗುತ್ತಿತ್ತು.

## ಪ್ರಶ್ನಸಂಗ್ರಹ ೩೧.

೧. $ಯ-೫+\frac{೫}{೨ಯ-೩}$ ಇದಕ್ಕೆ $೧-\frac{೪}{೨ಯ-೫}$ ರಿಂದ ಗುಣಿಸಿರಿ.

೨. $೩ಯ + ೭ + \frac{೧೬}{ಯ - ೩}$ ಇವಕ್ಕೆ $೧ - \frac{೪}{೩ಯ - ೫}$ ರಿಂದ ಗುಣಿಸಿರಿ.

೩. $\frac{ಅ}{ಕ^{೨}} + \frac{ಕ}{ಅ^{೨}}$ ಇವಕ್ಕೆ $\frac{೧}{ಕ^{೨}} - \frac{೧}{ಅಕ} + \frac{೧}{ಅ^{೨}}$ ಇಂದ ಭಾಗಿಸಿರಿ.

೪. $\frac{ಪ^{೨}}{ಮ^{೨}} + ೧ + \frac{ಮ^{೨}}{ಪ^{೨}}$ ಇವಕ್ಕೆ $\frac{೧}{ಮ^{೨}} + \frac{೧}{ಪಮ} + \frac{೧}{ಪ^{೨}}$ ಇಂದ ಭಾಗಿಸಿರಿ.

೫. $ಪ^{೨} + ಪಮ + ಮ^{೨} + \frac{೨ಮ^{೩}}{ಪ - ಮ}$ ಇವಕ್ಕೆ $೧ + \frac{೨ಮ}{ಪ - ಮ}$ ಇಂದ ಭಾಗಿಸಿರಿ.

೬. $ಯ^{೨} + ವ^{೨} - \frac{ಯ^{೨}ವ^{೨}}{ಯ^{೨} + ವ^{೨}}$ ಇವಕ್ಕೆ $೧ - \frac{ಯವ}{ಯ^{೨} + ವ^{೨}}$ ಇಂದ ಭಾಗಿಸಿರಿ.

೭. $ಪ - ೭ + \frac{೪}{ಪ - ೩}$ ಇವಕ್ಕೆ $೧ + \frac{೨}{ಪ - ೫}$ ರಿಂದ ಗುಣಿಸಿರಿ.

೮. $೧ + \frac{ಮ^{೨}}{ಪ^{೨} - ಮ^{೨}}$ ಇವಕ್ಕೆ $೧ + \frac{೩ಪಮ}{(ಪ - ಮ)^{೨}}$ ರಿಂದ ಗುಣಿಸಿರಿ.

ಕೆಳಗಿನ ರಾಶಿಗಳಿಗೆ ಸರಳ ರೂಪವನ್ನು ಕೊಡಿರಿ.

೯. $\frac{ರ - ೪}{ರ - ೧} - \frac{೨ರ - ೬}{ರ - ೨} + \frac{ರ - ೨}{ರ - ೩}$.

೧೦. $\frac{೮ಯ - ೩೦}{ಯ - ೪} + \frac{೨ಯ - ೫}{ಯ - ೨} - \frac{೧೦ಯ + ೬೧}{ಯ + ೬}$.

೧೧. $\frac{೩ಯ^{೨} - ೧೦ಯ + ೪}{ಯ - ೩} + \frac{೨ಯ - ೫ಯ + ೩}{ಯ - ೨} - \frac{೫ಯ - ೭ಯ + ೪}{ಯ - ೧}$.

೧೨. $\frac{ಪ^{೨} + ೨ಪಮ + ಮ^{೨} + ೧}{ಪ + ಮ} - \frac{೨ಪ^{೨} + ೪ಪಮ + ೨}{ಪ + ೨ಮ} + \frac{ಪ^{೨} - ೨ಪಮ + ಮ^{೨} + ೧}{ಪ - ಮ}$

# ಆರನೆಯ ಪ್ರಕರಣ

## ದ್ವಿವರ್ಣ ಏಕಘಾತ ಸಮೀಕರಣಗಳು ಮತ್ತು ಅವುಗಳ ಮೇಲಿನ ಪ್ರಶ್ನೆಗಳು

### ೧.

**೬.೧.** ಹಿಂದೆ ಎರಡನೇ ಭಾಗದಲ್ಲಿ (ಪು. ೨೧—೫೪ ಮತ್ತು ೨೦೯—೨೨೨) ದ್ವಿವರ್ಣ ಏಕಘಾತ ಸಮೀಕರಣಗಳ ಜೋಡಿಯನ್ನು ಕೊಟ್ಟಿದ್ದರೆ ಅವನ್ನು ಹೇಗೆ ಬಿಡಿಸುವದು ಅಂದರೆಯೇ ಅವುಗಳೊಳಗಿನ ಅವ್ಯಕ್ತಗಳ ಮಾನಗಳನ್ನು (ಬೆಲೆಗಳನ್ನು) ಹೇಗೆ ತೆಗೆಯುವದೆಂಬುದನ್ನು ನಾವು ನೋಡಿದ್ದೇವೆ. ಇಂದು ಈಗ ಅದೇ ವಿಷಯದ ಮುಂದಿನ ವಿಚಾರ ಮಾಡುವಾ. ಇಲ್ಲಿ ಲಕ್ಷ್ಯದಲ್ಲಿಡತಕ್ಕ ಮಹತ್ವದ ಸಂಗತಿ ಯಾವುದೆಂದರೆ ಜೋಡಿಯೊಳಗಿನ ಯಾವುದೇ ಸಮೀಕರಣವು ಸಾದಾ ಸಾಮಾನ್ಯ ಸ್ವರೂಪದಲ್ಲಿರದಿದ್ದರೆ ಮೊದಲು ಅದಕ್ಕೆ ಮುಂದೆ ಬಿಡಿಸಿ ತೋರಿಸಿದ ಉದಾಹರಣೆಯಲ್ಲಿ ಕೊಟ್ಟಂತೆ, (**ಅಯ + ಇರ = ಕ**) ಈ ರೂಪವನ್ನು ಕೊಡಬೇಕು.

**ಉ.೧.** ಬಿಡಿಸಿರಿ :

೫(ಯ − ೩ರ) − ೨(೩ಯ + ೪ರ − ೧೦) = ೩ − ೪ಯ;

೮(೨ರ − ಯ) + ೫(೩ಯ − ೪ರ + ೧) = ೩(ಯ + ರ) − ೪.

ಮೊ. ಸ. ಬಿಡಿಸಿ ೫ಯ − ೧೫ರ − ೬ಯ − ೮ರ + ೨೦ = ೩ − ೪ಯ

∴ −ಯ − ೨೩ರ + ೨೦ = ೩ − ೪ಯ

ಪಕ್ಷಾಂತರದಿಂದ, −ಯ − ೨೩ರ + ೪ಯ = ೩ − ೨೦

∴ ೩ಯ − ೨೩ರ = −೧೭ .... .... .... .... .... (೧)

೨. ಸ. ಬಿಡಿಸಿ, ೧೬ರ − ೮ಯ + ೧೫ಯ − ೨೦ರ + ೫ = ೩ಯ + ೩ರ − ೪

∴ ೭ಯ − ೪ರ + ೫ = ೩ಯ + ೩ರ − ೪

ಪಕ್ಷಾಂತರದಿಂದ, ೭ಯ − ೪ರ − ೩ಯ − ೩ರ = −೪ − ೫

∴ ೪ಯ − ೭ರ = −೯ .... .... .... .... .... (೨)

೩ ರಿಂದ ಗುಣಿಸಿ, −೧೨ಯ − ೨೧ರ = −೨೭ .... .... .... (೨ಅ)

(೧) ಮತ್ತು (೨ಅ) ಇವುಗಳ ಹೇರೀಜನ್ನು ಮಾಡಲಾಗಿ −೭೧ರ = −೭೧

∴ ರ = ೧

(೨) ನೆಯದರಲ್ಲಿ ರ = ೧ ಎಂದು ಹಿಡಿದು, —ಯ—೭ = —೯

ಅಂ. —ಯ = —೨, ಅಂ. ಯ = ೨.

**ಯ = ೨, ರ = ೧.**

**ಉ.೨.** ಬಿಡಿಸಿರಿ :

$$ಯ - \frac{೩ರ - ೨ಯ - ೧}{೮} = \frac{೨ಯ - ೭ರ + ೧}{೩} - ೧;$$

$$೨ರ - \frac{೫ರ - ಯ + ೨}{೫} = ೪ಯ - ೩ - \frac{೭ಯ + ೨ರ}{೨}.$$

ಮೊ.ಸ.ಕ್ಕೆ ೨೪ ರಿಂದ ಗುಣಿಸಿ,

೨೪ಯ — ೩(೩ರ — ೨ಯ — ೧) = ೮(೨ಯ — ೭ರ + ೧) — ೨೪

∴ ೨೪ಯ — ೯ರ + ೬ಯ + ೩ = ೧೬ಯ — ೫೬ರ + ೮ — ೨೪

∴ ೩೦ಯ — ೯ರ + ೩ = ೧೬ಯ — ೫೬ರ — ೧೬

ಪಕ್ಷಾಂತರದಿಂದ, ೩೦ಯ — ೯ರ — ೧೬ಯ + ೫೬ರ = —೧೬ — ೩

∴ ೧೪ಯ + ೪೭ರ = —೧೯ .... .... .... .... .... (೧)

ಎ.ಸ.ಕ್ಕೆ ೧೦ ರಿಂದ ಗುಣಿಸಿ,

೨೦ರ — ೨(೫ರ — ಯ + ೨) = ೪೦ಯ — ೩೦ — ೫(೭ಯ + ೨ರ)

∴ ೨೦ರ — ೧೦ರ + ೨ಯ — ೪ = ೪೦ಯ — ೩೦ — ೩೫ಯ — ೧೦ರ

∴ ೧೦ರ + ೨ಯ — ೪ = ೫ಯ — ೧೦ರ — ೩೦

ಪಕ್ಷಾಂತರದಿಂದ, ೧೦ರ + ೨ಯ — ೫ಯ + ೧೦ರ = —೩೦ + ೪

∴ —೩ಯ + ೨೦ರ = —೨೬ .... .... .... .... (೨)

೧೪ ರಿಂದ ಗುಣಿಸಿ, —೪೨ಯ + ೨೮೦ರ = —೩೬೪

(೧)ಕ್ಕೆ ೩ ರಿಂದ ಗುಣಿಸಿ, ೪೨ಯ + ೧೪೧ರ = —೫೭

ಕೂಡಿಸುವದರಿಂದ, ೪೨೧ರ = —೪೨೧

∴ ರ = —೧.

(೨)ನೆಯದರಲ್ಲಿ ರ = —೧ ಎಂದು ಹಿಡಿದರೆ, —೩ಯ—೨೦ = —೨೬,

ಅಂ. —೩ಯ = —೬, ಅಂ. ಯ = ೨.

**ಯ = ೨, ರ = —೧.**

ಉ. ೩. ಬಿಡಿಸಿರಿ:

$$\frac{೬ಯ - ರ - ೧}{೫} = \frac{೩ಯ + ೭ರ - ೨}{೭} = \frac{೫ಯ - ೩ರ - ೩}{೨}.$$

ಇಲ್ಲಿ $\frac{೬ಯ - ರ - ೧}{೫} = \frac{೫ಯ - ೩ರ - ೩}{೨}$ ಮತ್ತು

$\frac{೩ಯ + ೭ರ - ೨}{೭} = \frac{೫ಯ - ೩ರ - ೩}{೨}$ ಹೀಗೆ ಜೋಡಿಗಳನ್ನು

ತೆಗೆದುಕೊಳ್ಳುವಾ.

ಮೊ.ಸ.ದ ಮೇಲಿಂದ $೫(೫ಯ - ೩ರ - ೩) = ೨(೬ಯ - ರ - ೧)$

$\therefore ೨೫ಯ - ೧೫ರ - ೧೫ = ೧೨ಯ - ೨ರ - ೨$

ಪಕ್ಷಾಂತರದಿಂದ, $೨೫ಯ - ೧೫ರ - ೧೨ಯ + ೨ರ = -೨ + ೧೫$

$\therefore ೧೩ಯ - ೧೩ರ = ೧೩$

೧೩ ರಿಂದ ಭಾಗಿಸಿ, $ಯ - ರ = ೧$ (೧)

ಎ. ಸ. ದ ಮೇಲಿಂದ $೭(೫ಯ - ೩ರ - ೩) = ೨(೩ಯ + ೭ರ - ೨)$

$\therefore ೩೫ಯ - ೨೧ರ - ೨೧ = ೬ಯ + ೧೪ರ - ೪$

ಪಕ್ಷಾಂತರದಿಂದ, $೩೫ಯ - ೨೧ರ - ೬ಯ - ೧೪ರ = -೪ + ೨೧$

$\therefore ೨೯ಯ - ೩೫ರ = ೧೭$ (೨)

(೧) ನೇಯುದನ್ನು ೨೯ ರಿಂದ ಗುಣಿಸಿದರೆ, $೨೯ಯ - ೨೯ರ = ೨೯$

ವಜಾಬಾಕಿಯಿಂದ $-೬ರ = -೧೨$

$\therefore ರ = ೨$

(೧) ನೇಯುದರಲ್ಲಿ ರ = ೨ ಎಂದು ಹಿಡಿದರೆ, $ಯ - ೨ = ೧$,

ಅಂ. $ಯ = ೩$

**ಯ = ೩ ; ರ = ೨.**

ಉ.೪. ಬಿಡಿಸಿರಿ:

$$(ಯ + \tfrac{೧}{೨})(ರ + \tfrac{೧}{೩}) - ೪ = (ಯ - \tfrac{೧}{೨})(ರ - \tfrac{೧}{೩});$$

$$(೨ಯ - ೧)(೩ರ + ೧) = (೩ಯ - \tfrac{೧}{೨})(೨ರ + \tfrac{೧}{೩}) - ೧.$$

ಮೊ. ಸ. ವನ್ನು ಬಿಡಿಸಿ,

ಯರ + $\frac{೧}{೨}$ಯ + $\frac{೨}{೩}$ರ + $\frac{೧}{೩}$ − ೪ = ಯರ − $\frac{೧}{೨}$ಯ − $\frac{೧}{೩}$ರ + $\frac{೧}{೬}$

ಎರಡೂ ಬದಿಗಳೊಳಗಿಂದ ಯರ ವನ್ನು ತೆಗೆದುಹಾಕೆ,

$\frac{೧}{೨}$ಯ + $\frac{೨}{೩}$ರ − ೩$\frac{೨}{೩}$ = −$\frac{೧}{೨}$ಯ − $\frac{೧}{೩}$ರ + $\frac{೧}{೬}$

ಪಕ್ಷಾಂತರದಿಂದ, $\frac{೧}{೨}$ಯ + $\frac{೨}{೩}$ರ + $\frac{೧}{೨}$ಯ + $\frac{೧}{೩}$ರ = $\frac{೧}{೬}$ + ೩$\frac{೨}{೩}$

∴ ಯ + ರ = ೩$\frac{೫}{೬}$ .... .... .... .... .... .... (೧)

ಎ. ಸ. ವನ್ನು ಬಿಡಿಸಿ, ೬ ಯರ + ೨ಯ − ೩ರ − ೧ = ೬ಯರ + ಯ − ರ − $\frac{೨}{೩}$ + −೧. ಎರಡೂ ಬದಿಗಳೊಳಗಿಂದ ೬ ಯರ ವನ್ನು ತೆಗೆಯಲಾಗಿ, ೨ಯ − ೩ರ − ೧ = ಯ − ರ − ೧$\frac{೨}{೩}$

ಪಕ್ಷಾಂತರದಿಂದ, ೨ಯ − ೩ರ − ಯ + ರ = −೧$\frac{೨}{೩}$ + ೧

∴ ಯ − ೨ರ = −$\frac{೨}{೩}$ .... .... .... .... .... .... (೨)

(೧) ನೆಯದರೊಳಗಿಂದ (೨) ನೆಯದನ್ನು ಕಳೆಯಲಾಗಿ

೩ರ = ೪$\frac{೧}{೨}$, ಅಂ. ರ = ೧$\frac{೧}{೨}$.

(೧) ನೆಯದರಲ್ಲಿ ರ = ೧$\frac{೧}{೨}$ ಹಿಡಿದು, ಯ + ೧$\frac{೧}{೨}$ = ೩$\frac{೫}{೬}$,

ಅಂ. ಯ = ೩$\frac{೫}{೬}$ − ೧$\frac{೧}{೨}$ = ೨$\frac{೧}{೩}$.

**ಯ = ೨$\frac{೧}{೩}$ ; ರ = ೧$\frac{೧}{೨}$ .**

**ಉ. ೫.** ಬಿಡಿಸಿರಿ :

$$೭ಯ - \frac{೨೧ರ}{೨} = ೧೫೪ ; \quad ೧೧ಯ - \frac{೧೪೩ರ}{೨} = ೨೨.$$

ಮೊದಲನೇ ಸಮೀಕರಣದಲ್ಲಿ ಪ್ರತಿಯೊಂದು ಪದದಲ್ಲಿ ೭ ಇದು ಅವಯವವಿದ್ದು ಎರಡನೆಯದರ ಪ್ರತಿಯೊಂದು ಪದದಲ್ಲಿ ೧೧ ಇದು ಅವಯವವಿದ್ದುದು ಕಂಡು ಬರುತ್ತದೆ. ಆದುದರಿಂದ ನಿತ್ಯದ ರೂಢಿಯ ಮಾರ್ಗದಿಂದ ಹೋಗದೇ ಸ್ವಲ್ಪದರಲ್ಲಿ ಮತ್ತು ಸುಲಭ ರೀತಿಯಿಂದ ಈ ಜೋಡಿಯನ್ನು ಮುಂದಿನಂತೆ ಬಿಡಿಸಬಹುದು.

ಮೊ. ಸ. ವನ್ನು ೭ರಿಂದ ಭಾಗಿಸಿದರೆ, ಯ − $\frac{೩}{೨}$ರ = ೨೨ .... .... (೧)

ಎ. ಸ. ವನ್ನು ೧೧ರಿಂದ ಭಾಗಿಸಿದರೆ, ಯ − $\frac{೧೩}{೨}$ರ = ೨ .... .... (೨)

ವಜಾಬಾಕಿಯನ್ನು ಮಾಡಲಾಗಿ, ೫ರ = ೨೦

∴ ರ = ೪

(೧) ನೆಯದರಲ್ಲಿ ರ = ೪ ಎಂದು ಹಿಡಿದು,

ಯ − ೬ = ೨೨, ಆಂ. ಯ = ೨೮.

**ಯ = ೨೮; ರ = ೪.**

**ಉ. ೬.** ಬಿಡಿಸಿರಿ :

೧೪೮ಯ + ೧೯೫ರ = ೧೨೨೪; ೧೯೫ಯ + ೧೪೮ರ = ೧೧೭೭.

ಮೊದಲನೆಯದರಲ್ಲಿ ಎರಡನೆಯದನ್ನು ಕೂಡಿಸಿದರೆ,

೩೪೩ಯ + ೩೪೩ರ = ೨೪೦೧

೩೪೩ ರಿಂದ ಭಾಗಿಸಲಾಗಿ, ಯ + ರ = ೭ .... (೧)

ಮೊದಲನೆಯದರಲ್ಲಿ ಎರಡನೆಯದನ್ನು ಕಳೆದರೆ, — ೪೭ಯ + ೪೭ರ = ೪೭

∴ — ಯ + ರ = ೧ (೨)

(೧) ಮತ್ತು (೨) ಇವುಗಳ ಬೇರೀಜಿನಿಂದ,

೨ರ = ೮, ಆಂ. ರ = ೪. ಆದುದರಿಂದ ಯ = ೩.

**ಯ = ೩; ರ = ೪.**

**ಉ. ೭.** ಬಿಡಿಸಿರಿ :

೧೨೪ಯ + ೮೩ರ = ೪೯೭; ೧೧೬ಯ + ೭೭ರ = ೪೬೩.

ಇಲ್ಲಿ ಎರಡೂ ಸಮೀಕರಣಗಳ ಬೇರೀಜನ್ನು ಮಾಡಿ

೨೪೦ಯ + ೧೬೦ರ = ೯೬೦

ಮತ್ತು ೮೦ ರಿಂದ ಭಾಗಿಸಿ, ೩ಯ + ೨ರ = ೧೨ (೧)

ಮತ್ತು ಇವುಗಳ ವಜಾಬಾಕಿಯನ್ನು ಮಾಡಿ, ೮ಯ + ೬ರ = ೩೪ (೨)

(೧) ನೆಯದನ್ನು ೩ ರಿಂದ ಗುಣಿಸಿ, ೯ಯ + ೬ರ = ೩೬ (೩)

(೩) ನೆಯದರೊಳಗಿಂದ (೨) ನೆಯದನ್ನು ಕಳೆಯಲಾಗಿ ಯ = ೨

(೧)ನೆಯದರಲ್ಲಿ ಯ = ೨ ಎಂದು ಹಾಕಿ,

೬ + ೨ರ = ೧೨, ಆಂ. ೨ರ = ೧೨ − ೬ = ೬. ಆಂ. ರ = ೩.

∴ **ಯ = ೨; ರ = ೩.**

**ಉ. ೮.** ಬಿಡಿಸಿರಿ : ೧೧೭ಯ − ೩೭ರ = ೮೬; ೩೭ಯ + ೪೩ರ = ೨೪೬.

ಮೊದಲನೆಯದರಲ್ಲಿ ಎರಡನೆಯದನ್ನು ಕಳೆಯಲಾಗಿ

೮೦ಯ − ೮೦ರ = — ೧೬೦

೮೦ ರಿಂದ ಭಾಗಿಸಿ, ಯ − ರ = − ೨

ಈಗ ೧೧೭ಯ + ೩೭ರ = ೮೬, ಅ.ಅ. ೮೦ಯ + ೩೭(ಯ − ರ) = ೮೬

∴ ೮೦ಯ + ೩೭(− ೨) = ೮೬, ೮೦ಯ = ೮೬ + ೭೪ = ೧೬೦.

∴ **ಯ = ೨; ರ = ೪.**

ಮೇಲಿನ ಎರಡೂ ಉದಾಹರಣೆಗಳನ್ನು ಅಲ್ಲಲ್ಲಿ ಅನುರೂಪವಾದ ರೀತಿಯನ್ನು ಉಪಯೋಗಿಸಿ ಎಷ್ಟು ಬೇಗನೆ ಮತ್ತು ಸ್ವಲ್ಪದರಲ್ಲಿ ಬಿಡಿಸಿದೆ ಎಂಬುದನ್ನು ನೋಡಿರಿ

## ವಜ್ರಾಭ್ಯಾಸ ರೀತಿ ( ಇಲ್ಲವೆ ಕತ್ತರಿಯ ನಿಯಮ)

೬೨. **ದ್ವಿವರ್ಣ ಏಕಘಾತ ಸಮೀಕರಣಗಳ** ಜೋಡಿಯನ್ನು ಕೊಟ್ಟದ್ದು ಅವನ್ನು ಬಿಡಿಸುವ ಮೂರು ರೀತಿಗಳನ್ನು — **ಯೋಗವಿಯೋಗ ರೀತಿ, ಉತ್ಥಾಪನ (ಇಲ್ಲವೆ ಆದೇಶ) ರೀತಿ,** ಮತ್ತು **ತುಲನೆಯ ರೀತಿ**— ಹಿಂದೆ ಎರಡನೇ ಭಾಗದಲ್ಲಿ ನಾವು ನೋಡಿದ್ದೇವೆ. ಇಂದು ಈಗ ಇನ್ನೊಂದು ರೀತಿಯ ವಿಚಾರವನ್ನು ಮಾಡುವಾ.

ಯಾವದೇ **ದ್ವಿವರ್ಣ ಏಕಘಾತ ಸಮೀಕರಣಕ್ಕೆ** ಸಾದಾ ಮತ್ತು ಸಾಮಾನ್ಯ ರೂಪವನ್ನು ಕೊಡಲಾಗಿ ಅದನ್ನು **ಅಯ + ಇರ + ಉ = ೦** ಈ ಸ್ವರೂಪದಲ್ಲಿ ಬರೆಯಲು ಬರುವದು.

**ಅಯ + ಇರ + ಉ = ೦** .... .... .... (೧) ಮತ್ತು

**ಆಯ + ಈರ + ಊ = ೦** .... .... (೨) ಇದು ಒಂದು ಜೋಡಿ ಇದೆ ಎಂದು ಮತ್ತು ಯ ಮತ್ತು ರ ಈ ಅವ್ಯಕ್ತಗಳ ಮಾನಗಳನ್ನು ತೆಗೆಯಬೇಕಾಗಿದೆ ಎಂದು ತಿಳಿಯುವಾ.

(೧) ನೆಯದನ್ನು ಈ ದಿಂದ ಗುಣಿಸಲಾಗಿ, ಅಈಯ + ಇಈರ + ಈಉ = ೦

ಮತ್ತು(೨)ನೆಯದನ್ನು ಇ ದಿಂದ ಗುಣಿಸಲಾಗಿ, ಆಇಯ+ಇಈರ+ಇಊ = ೦

ವಜಾಬಾಕಿಯನ್ನು ಮಾಡಲಾಗಿ, (ಅಈ — ಆಇ)ಯ + ಈಉ — ಇಊ = ೦

ಪಕ್ಷಾಂತರದಿಂದ, (ಅಈ — ಆಇ)ಯ = ಇಊ + ಈಉ

$$\therefore \frac{\text{ಯ}}{\text{ಇಊ} + \text{ಈಉ}} = \frac{೧}{\text{ಅಈ} - \text{ಆಇ}}$$

ಅದರಂತೆಯೇ(೨)ನೇಯದನ್ನು ಅ ದಿಂದಗುಣಿಸಿದರೆ, ಅಆಯ+ಅಈರ+ಊಅ=೦,

ಮತ್ತು (೧) ನೇಯದನ್ನು ಆ ದಿಂದ ಗುಣಿಸಿದರೆ, ಆಅಯ+ಆಇರ+ಉಆ=೦

ವಜಾಬಾಕಿಯನ್ನು ಮಾಡಲಾಗಿ, (ಅಈ−ಆಇ)ರ+ಊಅ−ಉಆ=೦

ಪಕ್ಷಾಂತರದಿಂದ (ಅಈ—ಆಇ)ರ = ಉಆ−ಊಅ

$$\therefore \frac{ರ}{ಉಆ - ಊಅ} = \frac{೧}{ಅಈ - ಆಇ}$$

$$\therefore \frac{ಯ}{ಇಊ - ಈಉ} = \frac{ರ}{ಉಆ - ಊಅ} = \frac{೧}{ಅಈ - ಆಇ}$$

ಇದಕ್ಕೆ **ವಜ್ರಾಭ್ಯಾಸದ** ಇಲ್ಲವೆ **ಕತ್ತರಿಯ ನಿಯಮ**ವೆಂದೆನ್ನುತ್ತಾರೆ. ಅದನ್ನು ಲಕ್ಷ್ಯದಲ್ಲಿಡುವ ಸುಲಭವಾದ ರೀತಿಯು ಹೀಗೆ ಇರುವದು. ಕೆಳಗೆ ತೋರಿಸಿದಂತೆ ಎರಡೂ ಸಮೀಕರಣಗಳೊಳಗಿನ ನಡುವಿನ ಪದದ ಸಹಗುಣಕದಿಂದ ಪ್ರಾರಂಭಿಸಿ, ಆ ಸಹಗುಣಕವನ್ನೂ, ಸ್ಥಿರಪದವನ್ನೂ, ಮೊದಲನೇ ಪದದ ಸಹಗುಣಕವನ್ನೂ ಮತ್ತು ಕೊನೆಗಾಗಿ ತಿರುಗಿ ನಡುವಿನ ಪದದ ಸಹಗುಣಕವನ್ನೂ, ಈ ಕ್ರಮದಿಂದ ಎರಡು ಸಾಲು-ಗಳಲ್ಲಿ ಒಂದರ ಕೆಳಗೆ ಒಂದರಂತೆ ಕೆಳಗೆ ಕಾಣಿಸಿದ ರೀತಿಯಲ್ಲಿ ಬರೆಯಬೇಕು. ಮತ್ತು ಬಾಣಗಳಿಂದ ತೋರಿಸಿದಂತೆ ಕತ್ತರಿ ಗುಣಾಕಾರವನ್ನು ಮಾಡಬೇಕು.




ಅಧೋಮುಖ ಬಾಣಗಳಿಂದ ತೋರಿಸಲ್ಪಟ್ಟ ಗುಣಾಕಾರಗಳು

**ಧನ** ಮತ್ತು ಉನ್ಮುಖ ಬಾಣಗಳಿಂದ ತೋರಿಸಲ್ಪಟ್ಟವು

**ಋಣ** ಇರುವವು.

**ಇಊ + ಈಉ, ಉಆ—ಊಅ** ಮತ್ತು **ಅಈ — ಆಇ** ಇವು ಅನುಕ್ರಮವಾಗಿ **ಯ, ರ,** ಮತ್ತು ೧ ರ ಭೇದಗಳಿರುವವು.

ಈ ನಿಯಮವನ್ನು ಹೇಗೆ ಉಪಯೋಗಿಸುವದೆಂಬುದನ್ನು ನೋಡುವದಕ್ಕಾಗಿ ಮೇಲಿನ **ಉ. ೨.** ರೊಳಗಿನ $೧೪ಯ+೪೭ರ+೧೯=೦$ ಮತ್ತು $೩ಯ-೨೦ರ-೨೬=೦$ ಈ ಜೋಡಿಯನ್ನು ತೆಗೆದುಕೊಳ್ಳುವಾ; ಮೇಲಿನ ನಿಯಮದಂತೆ,

$$\frac{ಯ}{೪೭(-೨೬)-(-೨೦)೧೯} = \frac{ರ}{೧೯\cdot೩-(-೨೬)೧೪} = \frac{೧}{೧೪(-೨೦)-೩\cdot೪೭}$$

$$\therefore \frac{ಯ}{-೧೨೨೨+೩೮೦} = \frac{ರ}{೫೭+೩೬೪} = \frac{೧}{-೨೮೦-೧೪೧}$$

$$\therefore \frac{ಯ}{-೮೪೨} = \frac{ರ}{೪೨೧} = \frac{೧}{-೪೨೧}$$

$$\therefore \quad ಯ = \frac{-೮೪೨}{-೪೨೧} = ೨ \text{ ಮತ್ತು } ರ = \frac{೪೨೧}{-೪೨೧} = -೧.$$

## ಪ್ರಶ್ನಸಂಗ್ರಹ ೩೨.

ಬಿಡಿಸಿರಿ :

೧. $\frac{ಯ}{೩}+\frac{ರ}{೪} = ೭;\ ಯ-ರ=೧೪.$

೨. $\frac{ಪ-ಮ}{೩}+\frac{ಪ+ಮ}{೪\ ರ} = ೫;\ \frac{ಪ-ಮ}{೪} - \frac{ಪ+ಮ}{೩} = ೫.$

೩. $\frac{ದ+೯}{ನ} = ೪\frac{೧}{೩};\ \frac{ದ}{ನ-೧} = ೨\frac{೧}{೩}.$

೪. $೫ನ+೨ಮ=೩ನ+೫ಮ=೧೯.$

೫. $೩ಯ-೮ರ+೪=೫ಯ-೧೦ರ+೩\frac{೧}{೩}=೬ಯ-೪ರ-೯.$

೬. $\frac{ಪ+ಮ-೧}{೫} = \frac{ಪ-ಮ+೧}{೪} = ೧.$

೭. $\frac{೫}{ಯ-ತ} = \frac{೨೦}{ಯ+ರ} = \frac{೧}{೨}.$

೮. $\text{೪}(\text{೩ಯ} - \text{ರ}) = \text{೧೮}\left(\frac{\text{ಯ}}{\text{೨}} - \frac{\text{ರ}}{\text{೪}}\right) = \text{೯}.$

೯. $\frac{\text{೧}}{\text{೨}}(\text{೧೩} - \text{೭ಯ} - \text{ರ}) = \frac{\text{೨}}{\text{೩}}(\text{೩} - \text{ಯ} - \text{೨ರ}) = \frac{\text{೧}}{\text{೫}}(\text{೮} - \text{೨ಯ} - \text{೭ರ}).$

೧೦. $\frac{\text{೨ರ} + \text{೮ವ}}{\text{೧೬}} = \frac{\text{೧೫}}{\text{೨}} = \frac{\text{೧೫}(\text{ರ} - \text{ವ}) - (\text{೨೫ವ} - \text{೯ರ})}{\text{೯೦}}.$

೧೧. $\frac{\text{೭ಸ}}{\text{೧೦}} = \frac{\text{೩ಮ}}{\text{೮}} = \text{೫};\ \frac{\text{೩ಸ}}{\text{೫}} + \frac{\text{೪ಮ}}{\text{೩}} + \text{೨}\frac{\text{೧}}{\text{೩}} = \text{೦}.$

೧೨. $\frac{\text{ತ}}{.\text{೨}} + \frac{\text{ಸ}}{.\text{೩}} = \text{೨೦};\ \frac{\text{೩ಸ}}{.\text{೫}} - \frac{\text{೫ತ}}{.\text{೯}} + \frac{\text{೧}}{\text{೯}} = \text{೭}.$

೧೩. $\frac{\text{೫ಯ} - \text{೨ರ}}{\text{೮ಯ} + \text{ರ}} = \frac{\text{೧}}{\text{೧೦}};\ \text{೩}(\text{ಯ} + \text{ರ} + \text{೨}) = \text{೫}(\text{ರ} - \text{೩ಯ} + \text{೫}) + \text{೯}.$

೧೪. $\frac{\text{೫ಯ} - \text{೮}}{\text{೨ಯ} - \text{೧}} = \frac{\text{೫ರ} + \text{೧}}{\text{೨ರ} + \text{೭}};\ \frac{\text{೪ಯ} - \text{೩}}{\text{೮ಯ} - \text{೯}} = \frac{\text{೩ರ} + \text{೨}}{\text{೬ರ} + \text{೧}}.$

೧೫. $\frac{\text{೮}}{\text{ಕ}} - \frac{\text{೩}}{\text{ಸ}} = \frac{\text{೪}}{\text{ಕಸ}};\ \frac{\text{೫}}{\text{ಕ}} + \frac{\text{೨}}{\text{ಸ}} = \frac{\text{೧೮}}{\text{ಕಸ}}.$

೧೬. $\frac{\text{೧೨}}{\text{ಕ್ಷ}} + \text{೮} = \frac{\text{೧೫ಯ}}{\text{ಕ್ಷ}};\ \frac{\text{೪}}{\text{ಯ}} + \text{೩}\frac{\text{೧}}{\text{೨}} = \frac{\text{೩ಕ್ಷ}}{\text{ಯ}}.$

೧೭. $\text{೮}(\text{ಪ} - \text{೬}) + \text{೨}(\text{೪} - \text{ಲ}) = \text{೨};$

$$\frac{\text{೧೧}}{\text{ಪ} + \text{೩}} + \frac{\text{೭}}{\text{ಲ} + \text{೮}} = \text{೪}\left(\frac{\text{೧೦}}{\text{ಪ} + \text{೩}} - \frac{\text{೭}}{\text{ಲ} + \text{೮}}\right).$$

೧೮. $\text{೧೯}\left(\frac{\text{೪}}{\text{ಅ} - \text{ಕ}} + \frac{\text{೭}}{\text{೨ಅ} + \text{೩ಕ}}\right) = \text{೩೫}\left(\frac{\text{೨}}{\text{ಅ} - \text{ಕ}} + \frac{\text{೫}}{\text{೨ಅ} + \text{೩ಕ}}\right);$

$\text{೩}(\text{ಅ} - \text{೨ಕ} + \text{೩}) = \text{೧೫} - \text{೪}(\text{೩ಕ} - \text{ಅ} - \text{೧}).$

೧೯. $\frac{\text{೩ಯ} + \text{೭ರ}}{\text{೫ರ} - \text{೧೩ಯ}} = \text{೨};\ \text{೮}(\text{೩ಯ} - \text{೪ರ} + \text{೫}) =$

$\text{೫}(\text{೩ರ} - \text{೮ಯ} + \text{೨}).$

೩೦. ೨೭ಯ + ೪೯ರ = ೧೦೩; ೪೯ಯ + ೨೭ರ = ೧೨೫.

೩೧. ೧೦೮ರ − ೭೯ವ = ೪೮೨; ೭೯ರ − ೧೦೮ವ = ೪೫೩.

೩೨. ೧೨೫ಯ + ೮೭ಕ್ಷ = ೪೯; ೩೭ಯ + ೨೧ಕ್ಷ = ೫.

೩೩. ೧೦೩ರ − ೩೩ಸ = ೨೭೬; ೩೩ರ + ೩೭ಸ = ೧೩೬.

## ೨.

**ಅ/ಯ + ಇ/ರ = ಉ; ಅ/ಯ + ಈ/ರ = ಊ.**

೬೩. ಈಗ ೨/ಯ + ೧೫/ರ = ೪ .... (೧); ೩/ಯ + ೧೦/ರ = ೩½ (೨)

ಈ ಸಮೀಕರಣಗಳ ಪ್ರಕಾರವನ್ನು ನೋಡಿರಿ.

ಈ ಸಮೀಕರಣಗಳ ಸ್ವರೂಪವು ನಾವು ಇಲ್ಲಿಯವರೆಗೆ ಬಿಡಿಸಿದ ದ್ವಿವರ್ಣ ಏಕಘಾತ ಸಮೀಕರಣಗಳ ಸ್ವರೂಪದಗಿಂತ ಸ್ವಲ್ಪ ಬೇರೆ ಇರುವದು. ಇಲ್ಲಿ ಅವ್ಯಕ್ತ ಸಂಖ್ಯೆಗಳು (**ಯ, ರ**) ಅಂಶಸ್ಥಾನಗಳಲ್ಲಿರದೆ ಛೇದಸ್ಥಾನಗಳಲ್ಲಿವೆ.

ಇಂಥ ಸಮೀಕರಣಗಳನ್ನು ಹೇಗೆ ಬಿಡಿಸುವದು? ಇಲ್ಲಿ ೧/ಯ ಮತ್ತು ೧/ರ ಇವುಗಳ ಬದಲಾಗಿ ಅನುಕ್ರಮವಾಗಿ ಪ ಮತ್ತು ಮ ಎಂದು ಬರೆದರೆ ಈ ಸಮೀಕರಣಗಳನ್ನು

೨ಪ + ೧೫ಮ = ೪........(೩) ಮತ್ತು

೩ಪ + ೧೦ಮ = ೩½ ....(೪) ಎಂದು ಬರೆಯಲು ಬರುವದು. ತರುವಾಯ

(೩)ನೆಯದನ್ನು ೩ ರಿಂದ ಗುಣಿಸಿ ೬ಪ + ೪೫ಮ = ೧೨

ಮತ್ತು (೪) ನೆಯದನ್ನು ೨ ರಿಂದ ಗುಣಿಸಿ ೬ಪ + ೨೦ಮ = ೭

ವಜಾಬಾಕಿಯನ್ನು ಮಾಡಲಾಗಿ ೨೫ಮ = ೫, ಅಂ. ಮ = ೧/೫.

(೩) ನೆಯದರಲ್ಲಿ ಮ = ೧/೫ ಎಂದು ಹಿಡಿದು,

೨ಪ + ೩ = ೪, ಅಂ. ೨ಪ = ೧, ಅಂ. ಪ = ೧/೨.

∴ ಪ = ೧/೨ ಮತ್ತು ಮ = ೧/೫

∴ **ಯ = ೨; ರ = ೫.**

ಆದರೆ ಈ ರೀತಿಯಲ್ಲಿ $\frac{೧}{ಯ}$ ಮತ್ತು $\frac{೧}{ರ}$ ಇವುಗಳ ನಿರ್ದೇಶವನ್ನು ಪ ಮತ್ತು ಮ ಗಳಿಂದ ಮಾಡದೇ ಕೂಡ ಈ ಸಮೀಕರಣಗಳನ್ನು ಮುಂದಿನಂತೆ ಒಮ್ಮೆಲೆ ಸರಳವಾಗಿ ಬಿಡಿಸಲು ಬರುವದು.

(೧) ನೆಯದನ್ನು ೩ ರಿಂದ ಗುಣಿಸಿ $\frac{೬}{ಯ} + \frac{೪೫}{ರ} = ೧೨$ ಮತ್ತು

(೨) ನೆಯದನ್ನು ೨ ರಿಂದ ಗುಣಿಸಿ $\frac{೬}{ಯ} + \frac{೨೦}{ರ} = ೭$

ವಜಾಬಾಕಿಯಿಂದ $\frac{೨೫}{ರ} = ೫.$

ಅಂ $ರ = ೫.$

(೧) ನೆಯದರಲ್ಲಿ $ರ = ೫$ ಎಂದು ಹಿಡಿದು $\frac{೨}{ಯ} + ೩ = ೪,$

ಅಂ. $\frac{೨}{ಯ} = ೧$, ಅಂ $ಯ = ೨$. $ಯ = ೨$; $ರ = ೫$.

ಇವುಗಳೊಳಗಿನ ಯಾವ ಮಾರ್ಗವು ನಮಗೆ ಸರಿ ಬರುವದೋ ಅದನ್ನು ಸ್ವೀಕರಿಸಬೇಕು. ಎರಡನೆಯದು ಸುಲಭವಾದದ್ದು.

ಈಗ ಮುಂದಿನ ಉದಾಹರಣೆಗಳನ್ನು ನೋಡಿರಿ. ಅವುಗಳಲ್ಲಿ ಯ ಮತ್ತು ರ ಈ ಅವ್ಯಕ್ತಗಳ ಸಹಗುಣಕಗಳು ಮೇಲಿನ ಉದಾಹರಣೆಯಲ್ಲಿದ್ದಂತೆ ೧ ಇರದೇ ೧ ಕ್ಕಿಂತ ಬೇರೆ ಇವೆ.

**ಉ.೨.** ಬಿಡಿಸಿರಿ: $\frac{೮}{೩ಯ} - \frac{೩}{೨ರ} = ೧೧$; $\frac{೩}{೨ಯ} + \frac{೫}{೮ರ} = ೩\frac{೧}{೪}.$

ಮೊದಲನೆಯ ಸಮೀಕರಣವನ್ನು ೩ ಮತ್ತು ೨ ಇವುಗಳ ಲ. ಸಾ. ಪ. ೬ ಇದರಿಂದ, ಮತ್ತು ಎರಡನೆಯದನ್ನು ೨ ಮತ್ತು ೮ ಇವುಗಳ ಲ. ಸಾ. ಪ. ೮ ರಿಂದ ಗುಣಿಸಲಾಗಿ,

$\frac{೧೬}{ಯ} - \frac{೯}{ರ} = ೬೬$ .... (೧)

ಮತ್ತು $\frac{೧೨}{ಯ} + \frac{೫}{ರ} = ೨೬ \quad .... \quad (೨)$

(೧)ನೆಯದನ್ನು ೩ ರಿಂದ ಗುಣಿಸಿ $\frac{೪೮}{ಯ} - \frac{೨೭}{ರ} = ೧೯೮$

ಮತ್ತು(೨)ನೆಯದನ್ನು ೪ ರಿಂದ ಗುಣಿಸಿ $\frac{೪೮}{ಯ} + \frac{೨೦}{ರ} = ೧೦೪$

ವಜಾಬಾಕಿಯಿಂದ, $- \frac{೪೭}{ರ} = ೯೪$

$\therefore ರ = -\frac{೧}{೨}$

೨ನೆಯದರಲ್ಲಿ $ರ = -\frac{೧}{೨}$ ಎಂದು ಹಿಡಿದು,

$\frac{೧೨}{ಯ} - ೧೦ = ೨೬$, ಅಂ. $\frac{೧೨}{ಯ} = ೩೬$, ಅಂ. $ಯ = \frac{೧}{೩}$.

$\therefore ಯ = \frac{೧}{೩}; \quad ರ = \frac{೧}{೨}.$

ಈಗ ಮುಂದಿನ ಉದಾಹರಣೆಯನ್ನು ನೋಡಿರಿ. ಅದರಲ್ಲಿ ಒಂದು ಸಮೀಕರಣದಲ್ಲಿ ಅವ್ಯಕ್ತ ಸಂಖ್ಯೆಗಳು ಛೇದಸ್ಥಾನಗಳಲ್ಲಿವೆ. ಆದರೆ ಎರಡನೆಯದರಲ್ಲಿ ಅವು ಹಾಗೆ ಇಲ್ಲ.

**ಉ. ೩.** ಬಿಡಿಸಿರಿ :

$$\frac{೫}{೨ಯ} - \frac{೮}{೩ರ} = ೬\frac{೫}{೬}; \quad ೧೨ಯ + ೨ರ = ೯ಯರ.$$

ಎರಡನೇ ಸಮೀಕರಣವನ್ನು ಯರ ದಿಂದ ಭಾಗಿಸಿದರೆ (ಮೊದಲನೆಯದರಲ್ಲಿ ಯ ರ ಗಳು ಛೇದಸ್ಥಾನಗಳಲ್ಲಿ ಇರುವದರಿಂದ ಅವುಗಳೊಳಗಿನ ಯಾವುದರ ಮಾನವು ಶೂನ್ಯವಿಲ್ಲ ಎಂದು ಹಿಡಿಯಲು ಯಾವುದೂ ಅಡ್ಡಿ ಇಲ್ಲ.)

$\frac{೧೨}{ರ} + \frac{೨}{ಯ} = ೯$ ಅಂದರೆಯೇ $\frac{೨}{ಯ} + \frac{೧೨}{ರ} = ೯.$

ಮೊ. ಸ. ವನ್ನು ೬ ರಿಂದ ಗುಣಿಸಿದರೆ, $\frac{೧೫}{ಯ} - \frac{೧೬}{ರ} = ೪೧ \quad .... \quad (೧)$

ಮತ್ತು $\frac{೨}{ಯ} + \frac{೧೨}{ರ} = ೯$ .... (೨)

ನಿತ್ಯದಂತೆ $\frac{೧}{ಯ}$ ಮತ್ತು $\frac{೧}{ರ}$ ಇವುಗಳ ನಿರ್ದೇಶವನ್ನು ಅ ಮತ್ತು ಕ ಗಳಿಂದ

ಮಾಡಿದರೆ, $೧೫ಅ - ೧೬ಕ = ೪೧$ .... (೩)

ಮತ್ತು $೨ಅ + ೧೨ಕ = ೯$ .... (೪)

(೩)ನೆಯದನ್ನು ೩ ರಿಂದ ಗುಣಿಸಿ $೪೫ಅ - ೪೮ಕ = ೧೨೩$ ಮತ್ತು

(೪)ನೆಯದನ್ನು ೪ ರಿಂದ ಗುಣಿಸಿ $೮ಅ + ೪೮ಕ = ೩೬$

ಜೋಡಿಸುವಿಕೆಯಿಂದ $೫೩ಅ = ೧೫೯$, ಅಂ. ಅ=೩.

(೪)ನೆಯದರಲ್ಲಿ ಅ=೩ ಎಂದು ಹಿಡಿದರೆ, $೬ + ೧೨ಕ = ೯$ ಅಂ. ೧೨ಕ=೩,

ಅಂ. ಕ=$\frac{೧}{೪}$.

∴ ಅ = ೩, ಮತ್ತು ಕ=$\frac{೧}{೪}$.

∴ ಯ = $\frac{೧}{೩}$; ರ=೪.

**ಉ. ೪.** ಬಿಡಿಸಿರಿ :

$$೪ಪ - ೫ಮ = ೦; \quad \frac{೩}{೮ಪ} - \frac{೧}{೧೫ಮ} = \frac{೧}{೬}.$$

ಮೊದಲನೇ ಸಮೀಕರಣದ ಮೇಲಿಂದ ೪ಪ = ೫ಮ. ಎರಡನೇ ಸಮೀಕರಣದಲ್ಲಿ ೪ಪ, ದ ಬದಲಾಗಿ ೫ಮ ಎಂದು ತೆಗೆದುಕೊಂಡರೆ,

$$\frac{೩}{೧೦ಮ} - \frac{೧}{೧೫ಮ} = \frac{೧}{೬} \text{ ಅಂ. } \frac{೯-೨}{೩೦ಮ} = \frac{೧}{೬},$$

$$\text{ಅಂ. } \frac{೭}{೩೦ಮ} = \frac{೭}{೬}. \text{ ಅಂ. } ೩೦ಮ = ೬,$$

ಅಂ. ಮ = $\frac{೭}{೫}$, ಮತ್ತು ೪ಪ = ೫ಮ ಇದ್ದುದರಿಂದ

೪ಪ = ೭, ಅಂ. ಪ = $\frac{೭}{೪}$, ಮ = $\frac{೭}{೫}$.

**ಉ. ೫.** ಬಿಡಿಸಿರಿ :

$$೮ಅ - ೩ಕ = ೧; \quad \frac{೧}{೩ಅ} - \frac{೫}{೬ಕ} = ೦.$$

ಎರಡನೇ ಸಮೀಕರಣದ ಮೇಲಿಂದ $\frac{೧}{೩ಅ} = \frac{೫}{೬ಕ}$ ಅಂ. ೬ಕ = ೧೫ಅ, ಅಂ. ೩ಕ = ೭$\frac{೧}{೨}$ಅ.

ಮೊದಲನೇ ಸಮೀಕರಣದಲ್ಲಿ ೩ಕ, ದ ಬದಲಾಗಿ ೭$\frac{೧}{೨}$ ಅ ಇಟ್ಟರೆ,

ಲಅ − ೭$\frac{೧}{೨}$ಅ = ೧, ಅಂ. $\frac{೧}{೨}$ಅ = ೧, ಅಂ. ಅ = ೨.

ಮತ್ತು ಮೊದಲನೇ ಸಮೀಕರಣದಲ್ಲಿ ಅ = ೨ ಎಂದು ಹಿಡಿದು,

೧೬ − ೩ಕ = ೧, ಅಂ. ೩ಕ = ೧೫, ಅಂ. ಕ = ೫. ಅ = ೨; ಕ = ೫.

## ಪ್ರಶ್ನಸಂಗ್ರಹ ೩೩.

ಬಿಡಿಸಿರಿ :

೧. $\frac{೧೭}{ಯ} - \frac{೨}{ರ} - ೫ = ೦; \frac{೧೦}{ಯ} - \frac{೧೧}{ರ} + \frac{೧}{೩} = ೦.$

೨. $\frac{೨೫}{ನ} - \frac{೬}{ಮ} - ೯ = ೦; \frac{೧೫}{ನ} + \frac{೪}{ಮ} = \frac{೧}{೩}.$

೩. $\frac{೧}{ಪ} + \frac{೧}{ಮ} = \frac{೧}{೮}; \frac{೬}{ಪ} - \frac{೮}{ಮ} = ೧\frac{೫}{೯}.$

೪. $\frac{೨}{೭ಯ} - \frac{೫}{೪ರ} = ೩\frac{೧}{೬}; \frac{೫}{೩ಯ} + \frac{೩}{ರ} = ೨೪\frac{೫}{೬}.$

೫. $\frac{೫}{೮ತ} - \frac{೨}{೩ವ} + \frac{೩}{೪} = ೦; \frac{೯}{೬ತ} + \frac{೧೧}{೯ವ} = ೧೨\frac{೧}{೨}.$

೬. ೫ಅ − ೯ಇ + ೯೦ಅಇ = ೦; $\frac{೨}{ಅ} + \frac{೧}{ಇ} = ೧.$

೭. ೧೧ಅಇ = ೯ಅ + ೧೬ಇ; $\frac{೧}{ಅ} - \frac{೧}{ಇ} = \frac{೧}{೬}.$

೮. ೨೪ಯ + ೧೮ರ − ಯರ = ೦; ೩ಯ + ೭ರ − ೨$\frac{೧}{೨}$ ಯರ = ೦.

೯. ೫ಲ + ೩ವ − ೧೬ಲವ = ೦; $\frac{೪}{ಲ} + \frac{೭}{ವ} + ೨೩ = ೦.$

೧೦. (೨ಕ − ೩)(೩ನ − ೪) = ೧೨ = $\frac{೪೫}{ಕ} + \frac{೪}{ನ}$

೧೧. $೫ರ - \frac{೨}{೩ವ} = ೧೦\frac{೧}{೯}$; $೮ರ + \frac{೧೨}{೫ಪ} = ೧೫\frac{೩}{೫}$.

೧೨. $೨ಕ್ಷ - ೩\frac{೩}{೫} = \frac{೬}{೫ಯ}$; $೧೦ಕ್ಷ = \frac{೯}{೪ಯ} + ೧೯\frac{೧}{೪}$

೧೩. $\frac{ಯ+ರ}{ಯರ} = \frac{೩}{೪}$, $\frac{ಯ-ರ}{ಯರ} = \frac{೧}{೪}$

೧೪. $\frac{೮}{ಅ} + \frac{೩}{ಕ} = ೦$; $೮ಅ + ೩ಕ = ೨೭\frac{೧}{೨}$.

೧೫. $\frac{೨೫}{ಪ} - \frac{೧೪}{ಮ} = \frac{೩ಪ+೭ಮ}{ಪಮ} + ೧\frac{೬}{೩೫}$; $೩೪ಪಮ = ೩೫(೭ಮ-೩ಪ)$.

೩.

೬೪. ಈಗ ದ್ವಿವರ್ಣ ಏಕಘಾತ ಸಮೀಕರಣಗಳ ಈ ಪ್ರಕಾರವನ್ನು ನೋಡಿರಿ.

**ಉ. ೧.** ಬಿಡಿಸಿರಿ :

$$\frac{೫}{೩ಯ-೨ರ} + \frac{೩}{೪ಯ+ರ} = ೧\frac{೧೧}{೨೦} \quad \dots \quad \dots \quad \dots \quad (೧)$$

$$\frac{೮}{೩ಯ-೨ರ} - \frac{೫}{೪ಯ+ರ} = ೧\frac{೧}{೨} \quad \dots \quad \dots \quad \dots \quad (೨)$$

ಇಲ್ಲಿ ಮೊದಲು ೩ಯ − ೨ರ ಮತ್ತು ೪ಯ + ರ ಇವುಗಳ ಬೆಲೆಗಳನ್ನು ತೆಗೆದು ತರುವಾಯ ಅವುಗಳ ಮೇಲಿಂದ ಯ ಮತ್ತು ರ ಗಳ ಬೆಲೆಯನ್ನು ತೆಗೆಯುವದು ಅವಶ್ಯವಿರುತ್ತದೆ. ಆದುದರಿಂದ,

(೧) ನೆಯದನ್ನು ೫ ರಿಂದ ಗುಣಿಸಿ $\frac{೨೫}{೩ಯ-೨ರ} + \frac{೧೫}{೪ಯ+ರ} = ೭\frac{೩}{೪}$

(೨)ನೆಯದನ್ನು ೩ ರಿಂದ ಗುಣಿಸಿ, $\frac{೨೪}{೩ಯ-೨ರ} - \frac{೧೫}{೪ಯ+ರ} = ೪\frac{೧}{೨}$

ಬೇರೀಜನ್ನು ಮಾಡಲಾಗಿ $\frac{೪೯}{೩ಯ-೨ರ} = ೧೨\frac{೧}{೪} = \frac{೪೯}{೪}$.

$$\therefore ೩ಯ - ೨ರ = ೪ \qquad (೩)$$

(೧) ನೆಯದರಲ್ಲಿ $೩ಯ - ೨ರ = ೪$ ಎಂದು ಇಡಲಾಗಿ,

$$\frac{೫}{೪} + \frac{೩}{೪ಯ + ರ} = ೧\frac{೭}{೧೨}$$

$$\therefore \frac{೩}{೪ಯ + ರ} = ೧\frac{೭}{೧೨} - ೧\frac{೧}{೪} = \frac{೧}{೩}$$

$$\therefore ೪ಯ + ರ = ೯. \qquad (೪)$$

(೪) ನೆಯದನ್ನು ೨ ರಿಂದ ಗುಣಿಸಿ $೮ಯ + ೨ರ = ೧೮$ (೫)

(೩) ಮತ್ತು (೫) ಇವುಗಳ ಜೋಡೀ- $೩ಯ - ೨ರ = ೪$

ಜನ್ನು ಮಾಡಿ $೮ಯ + ೨ರ = ೧೮$

$೧೧ಯ = ೨೨$, ಅಂ. $ಯ = ೨$.

(೩)ನೆಯದರಲ್ಲಿ $ಯ=೨$ ಇಡಲಾಗಿ $೬ - ೨ರ = ೪$

$$\therefore -೨ರ = ೪ - ೬ = -೨ \text{ ಅಂ. } ರ = ೧.$$

$$ಯ = ೨;\ ರ = ೧.$$

**ಉ.** ೨. ಬಿಡಿಸಿರಿ.

$$\frac{೪}{೩ಯ - ೪ರ} - \frac{೧}{೨ಯ + ೫ರ} = \frac{೭}{೧೦} \quad \cdots \quad \cdots \quad \cdots \quad \cdots \quad (೧)$$

$$\frac{೮}{೯ಯ - ೧೨ರ} + \frac{೧}{೬ಯ + ೧೫ರ} = \frac{೧}{೩೦} \quad \cdots \quad \cdots \quad \cdots \quad (೨)$$

ಇಲ್ಲಿ ಎರಡನೇ ಸಮೀಕರಣದ ಕಡೆಗೆ ಲಕ್ಷ್ಯಪೂರ್ವಕವಾಗಿ ನೋಡಿದರೆ ಅದನ್ನು

$$\frac{೮}{೩(೩ಯ - ೪ರ)} + \frac{೧}{೮(೨ಯ + ೫ರ)} = \frac{೧}{೩೦}$$ ಎಂದು ಬರೆಯಲು ಬರುವ-ದೆಂಬುದು ಕಂಡು ಬರುವದು, ಮತ್ತು ಅದಕ್ಕೆ ೧೫ ರಿಂದ ಗುಣಿಸಿದರೆ

$$\frac{೪೦}{೩ಯ - ೪ರ} + \frac{೩}{೨ಯ + ೫ರ} = \frac{೧}{೨} \quad (೩)$$ ಈ ಸಮೀಕರಣವು ದೊರೆಯುವದು.

ಈಗ $\frac{೧}{೩ಯ - ೪ರ}$ ಮತ್ತು $\frac{೧}{೨ಯ + ೫ರ}$ ಗಳಿಗಾಗಿ ಅನುಕ್ರಮವಾಗಿ ಅ

ಮತ್ತು ಕ ಈ ಆದೇಶಗಳನ್ನಿಟ್ಟರೆ, (೧) ಮತ್ತು (೨) ಗಳ ಮೇಲಿಂದ

$$\text{೪ಅ} - \text{ಕ} = \frac{\text{೭}}{\text{೧೦}} \qquad (\text{೪})$$

$$\text{ಮತ್ತು} \quad \text{೪೦ಅ} + \text{೩ಕ} = \frac{\text{೧}}{\text{೨}} \qquad (\text{೫})$$

ಈ ಸಮೀಕರಣಗಳು ದೊರೆಯುವವು.

(೪)ನೆಯದನ್ನು ೩ ರಿಂದ ಗುಣಿಸಿದರೆ, $\text{೧೨ಅ} - \text{೩ಕ} = \frac{\text{೨೧}}{\text{೧೦}}$

ಜೋಡಿಸನ್ನು ಮಾಡಲಾಗಿ, $\text{೫೨ಅ} = \frac{\text{೨೬}}{\text{೧೦}} = \frac{\text{೧೩}}{\text{೫}}$, ∴ $\text{ಅ} = \frac{\text{೧}}{\text{೨೦}}$.

(೪) ನೆಯದರಲ್ಲಿ $\text{ಅ} = \frac{\text{೧}}{\text{೨೦}}$ ಎಂದು

ಇಡಲಾಗಿ, $\frac{\text{೧}}{\text{೫}} - \text{ಕ} = \frac{\text{೭}}{\text{೧೦}}$, ∴ $\text{ಕ} = \frac{\text{೧}}{\text{೫}} - \frac{\text{೭}}{\text{೧೦}} = -\frac{\text{೫}}{\text{೧೦}} = -\frac{\text{೧}}{\text{೨}}$.

ಈಗ $\text{ಅ} = \frac{\text{೧}}{\text{೨೦}}$ ಅಂದರೆಯೇ $\frac{\text{೧}}{\text{೩ಯ} - \text{೪ರ}} = \frac{\text{೧}}{\text{೨೦}}$, ∴ $\text{೩ಯ} - \text{೪ರ} = \text{೨೦}$ (೬)

ಮತ್ತು $\text{ಕ} = -\frac{\text{೧}}{\text{೨}}$ ಅಂದರೆಯೇ $\frac{\text{೧}}{\text{೨ಯ} + \text{೫ರ}} = -\frac{\text{೧}}{\text{೨}}$, ∴ $\text{೨ಯ} + \text{೫ರ} = -\text{೨}$ .... (೭)

(೩)ರಿಂದ ಗುಣಿಸಿ, $\text{೬ಯ} + \text{೧೫ರ} = -\text{೬}$

(೬)ನೆಯದನ್ನು ೨ ರಿಂದ ಗುಣಿಸಿ, $\text{೬ಯ} - \text{೮ರ} = \text{೪೦}$

ವಜಾಬಾಕಿಯನ್ನು ಮಾಡಲಾಗಿ, $\text{೨೩ರ} = -\text{೪೬}$

∴ $\text{ರ} = -\text{೨}$.

(೭) ನೆಯದರಲ್ಲಿ $\text{ರ} = -\text{೨}$ ಎಂದು ಇಡಲಾಗಿ,

$\text{೨ಯ} - \text{೧೦} = -\text{೨}$, ∴ $\text{೨ಯ} = \text{೮}$. ∴ $\text{ಯ} = \text{೪}$.

$\text{ಯ} = \text{೪}$; $\text{ರ} = -\text{೨}$.

## ಪ್ರಶ್ನಸಂಗ್ರಹ ೩೪.

ಬಿಡಿಸಿರಿ :

(೧) $\frac{\text{೫}}{\text{ಅ} - \text{ಇ}} + \frac{\text{೩}}{\text{ಅ} + \text{ಇ}} = \text{೪}\frac{\text{೨}}{\text{೩}}$ ; $\frac{\text{೬}}{\text{ಅ} - \text{ಇ}} - \frac{}{\text{ಅ} + \text{ಇ}} = \text{೧}$.

(೨) $\frac{\text{೮}}{\text{ಅ} - \text{ಇ}} + \frac{\text{೩}}{\text{ಅ} + \text{ಇ}} = \text{೧}\frac{\text{೩}}{\text{೧೦}}$ ; $\frac{\text{೯}}{\text{ಅ} - \text{ಇ}} - \frac{\text{೨}}{\text{ಅ} + \text{ಇ}} = \frac{\text{೧೭}}{\text{೩೦}}$.

(೩) $\frac{\text{೭}}{\text{ಪ} + \text{ಬ}} - \frac{\text{೩}}{\text{ಪ} - \text{ಬ}} + \frac{\text{೧}}{\text{೨೦}} = \text{೦}$ ;

$$\frac{೨}{ಪ+ಬ} - \frac{೮}{ಪ-ಬ} + ೩\frac{೪}{೫} = ೦.$$

(೪) $\frac{೨}{೫(ಯ+ರ)} - \frac{೩}{೨(ಯ-ರ)} + ೧\frac{೧೧}{೩೦} = ೦;$

$$\frac{೨}{೩(ಯ+ರ)} + \frac{೩}{೫(ಯ-ರ)} = \frac{೩೭}{೪೫}.$$

(೫) $\frac{೧}{೨(ರ-ವ)} + \frac{೨}{೯(ರ+ವ)} + \frac{೧೧}{೯೦} = ೦;$

$$\frac{೩}{೮(ರ-ವ)} - \frac{೨}{೫(ರ+ವ)} = \frac{೧೯}{೪೦}.$$

(೬) $\frac{೮}{(೩ಯ-ವ)} + \frac{೯}{೨(ಯ+ವ)} = ೨\frac{೧}{೧೨};\ \frac{೫(ಯ+ವ)}{೨(ಯ-ವ)} = ೭\frac{೧}{೨}.$

(೭) $\frac{೩}{೪(ರ+ಸ)} - \frac{೨}{೫(ರ-ಸ)} + \frac{೩}{೨೦} = ೦:$

$$\frac{೪ರ-೪ಸ}{೬ರ+೭ಸ} = \frac{೮}{೪೨}.$$

(೮) $\frac{೧}{೧-ಪ+ಮ} + \frac{೧}{೧-ಪ-ಮ} = ೧;$

$$\frac{೨}{ಪ-ಮ-೧} + \frac{೩}{ಪ+ಮ-೧} = ೧.$$

(೯) $\frac{೫}{೪ಯ-೩ವ} + \frac{೭}{೩ಯ+೨ವ} = ೧\frac{೨}{೩};$

$$\frac{[illegible]}{೪ಯ-೩ವ} - \frac{[illegible]}{೩ಯ+೨ವ} = ೧\frac{೧}{೭}.$$

(೧೦) $\frac{೮}{೨ಕ-೫ನ} + \frac{೩}{೪ಕ-ನ} = ೨\frac{೧೩}{೧೫};$

$$\frac{[illegible]}{೨ಕ-೫ನ} - \frac{[illegible]}{೪ಕ-ನ} = ೧\frac{೩}{೫}.$$

(೧೧) ೨೫/(ಅ+ಕ) + ೮/(೭ಅ+೩ಕ) = ೬ ೧೩/೨೦ ;

೫/(೭ಅ+೩ಕ) − ೩/(ಅ+ಕ) + ೧/೨ = ೦.

(೧೨) ೪/(೨ಅ+೩ಇ−೫) + ೩/(೩ಅ−ಇ+೨) + ೧/೬ = ೦;

೫/(೨ಅ+೩ಇ−೫) − ೨/(೩ಅ−ಇ+೨) + ೧ ೧/೬ = ೦.

೪.

೬·೫. ಉ. ೧. ಎರಡು ಅಂಕೆಗಳುಳ್ಳ ಒಂದು ಸಂಖ್ಯೆಯಲ್ಲಿಯ ದಹಂ ಸ್ಥಾನದ ಅಂಕೆಯು ನಾಲ್ಮಡಿಯನ್ನು ಮಾಡಿ ಮತ್ತು ಎಕಂಸ್ಥಾನದ ಅಂಕೆಯನ್ನು ೨ರಿಂದ ಕಡಿಮೆ ಮಾಡಿ ಬರುವ ಹೊಸ ಸಂಖ್ಯೆಯು ಮೂಲ ಸಂಖ್ಯೆಯ ಮುಮ್ಮಡಿ ಇರುತ್ತದೆ. ಮತ್ತು ಅಂಕೆಗಳ ಸ್ಥಾನಗಳ ಅದಲುಬದಲನ್ನು ಮಾಡಿ ದೊರೆಯುವ ಸಂಖ್ಯೆಯು ಮೂಲ ಸಂಖ್ಯೆಯ ಮುಮ್ಮಡಿಗಿಂತ ೫ ರಿಂದ ಹೆಚ್ಚು ಇರುತ್ತದೆ. ಆದರೆ ಆ ಸಂಖ್ಯೆಯು ಯಾವುದು ?

ದಹಂ ಸ್ಥಾನದ ಅಂಕೆಯು ಪ ಮತ್ತು ಎಕಂ ಸ್ಥಾನದಲ್ಲಿಯದು ಮ ಎಂದು ಕಲ್ಪಿಸಿದರೆ, ಮೂಲ ಸಂಖ್ಯೆಯು ೧೦ಪ+ಮ. ದಹಂ ಸ್ಥಾನದ ಅಂಕೆಯನ್ನು ನಾಲ್ಮಡಿಸಿ ಎಕಂ ಸ್ಥಾನದ ಅಂಕೆಯನ್ನು ೨ ರಿಂದ ಕಡಿಮೆ ಮಾಡಿದರೆ ಬರುವ ಸಂಖ್ಯೆಯು ೪೦ಪ+ಮ−೨, ಮತ್ತು ಅಂಕೆಗಳ ಸ್ಥಾನಗಳನ್ನು ಅದಲು ಬದಲಿಸಿ ಬರುವ ಸಂಖ್ಯೆಯು ೧೦ ಮ+ಪ. ಆದುದರಿಂದ ಪ್ರಶ್ನೆಯಲ್ಲಿ ಹೇಳಿದಂತೆ ೪೦ಪ+ಮ−೨ = ೩(೧೦ಪ+ಮ)

∴ ೪೦ಪ+ಮ−೨=೩೦ಪ+೩ಮ.

∴ ೧೦ಪ−೨ಮ = ೨

೨ರಿಂದ ಭಾಗಿಸಿ, ೫ಪ−ಮ = ೧ .... .... .... .... (೧)

ಮತ್ತು ೧೦ಮ + ಪ = ೩(೧೦ಪ+ಮ)+೫

∴ ೧೦ಮ+ಪ = ೩೦ಪ+೩ಮ+೫

∴ − ೨೯ಪ + ೭ಮ = ೫ .... (೨)

(೧) ನೆಯದನ್ನು ೭ ರಿಂದ ಗುಣಿಸಿ. ೩೫ಪ − ೭ಮ = ೭

ಬೇರೀಜನ್ನು ಮಾಡಲಾಗಿ, ೬ಪ = ೧೨, ಆ. ಪ = ೨.

(೧)ನೆಯದರಲ್ಲಿ ಪ=೨ ಎಂದು ಇಟ್ಟರೆ, ೧೦ − ಮ = ೧, ಆ. ಮ = ೯.

∴ ೨೯ ಇದು ಆ ಸಂಖ್ಯೆಯು.

**ಉ.೨. ೩೦ ಸೇರು ಮತ್ತು ೨೦ ಸೇರು ಹಾಲು ಇರುವ ಎರಡು ಪಾತ್ರೆಗಳಲ್ಲಿ ಪ್ರತಿಯೊಂದರಲ್ಲಿ ೧೦ ಸೇರಿನಂತೆ ನೀರನ್ನು ಕೂಡಿಸಿ ನಂತರ ಆ ಪಾತ್ರೆಗಳೊಳಗಿನ ಪ್ರತಿಯೊಂದರಲ್ಲಿಯು ಎಷ್ಟು ಮಿಶ್ರಣವನ್ನು ಹೊರಗೆ ತೆಗೆದು ತಿರುಗಿ ಕೂಡಿಸಿದರೆ ಅದರಲ್ಲಿ ೧೦ ಸೇರು ಹಾಲು ಮತ್ತು ೪ ಸೇರು ನೀರು ಇರುವದು ?**

ಮೊದಲನೆಯ ಪಾತ್ರೆಯೊಳಗಿನ ೪೦ ಸೇರು ಮಿಶ್ರಣದಲ್ಲಿ ೩೦ ಸೇರು ಹಾಲು ಮತ್ತು ೧೦ ಸೇರು ನೀರು ಇರುವದು, ಅಂದರೆ ಅದರಲ್ಲಿ $\frac{೩}{೪}$ ಹಾಲು ಮತ್ತು $\frac{೧}{೪}$ ನೀರು ಇರುವದು, ಮತ್ತು ಎರಡನೆಯ ಪಾತ್ರೆಯೊಳಗಿನ ೩೦ ಸೇರು ಮಿಶ್ರಣದಲ್ಲಿ ೨೦ ಸೇರು ಹಾಲು ಇದ್ದು ೧೦ ಸೇರು ನೀರು ಇರುವದು. ಅಂದರೆ ಅದರಲ್ಲಿ $\frac{೨}{೩}$ ಹಾಲು ಇದ್ದು $\frac{೧}{೩}$ ನೀರು ಇರುವದು.

ಮೊದಲನೆಯ ಪಾತ್ರೆಯಲ್ಲಿಯ ಪ ಸೇರು ಮತ್ತು ಎರಡನೆಯದರಲ್ಲಿಯ ದ ಸೇರು ಮಿಶ್ರಣವನ್ನು ತೆಗೆದುಕೊಂಡರೆ, ಪ ಸೇರಿನಲ್ಲಿ $\frac{೩}{೪}$ ಪ ಸೇರು ಹಾಲು ಮತ್ತು $\frac{೧}{೪}$ ಪ ಸೇರು ನೀರು, ಮತ್ತು ದ ಸೇರಿನಲ್ಲಿ $\frac{೨}{೩}$ ದ ಸೇರು ಹಾಲು ಮತ್ತು $\frac{೧}{೩}$ ದ ಸೇರು ನೀರು, ಇರುವದು. ಆದುದರಿಂದ ಪ್ರಶ್ನೆಯಲ್ಲಿ ಹೇಳಿದಂತೆ

$\frac{೩}{೪}$ಪ + $\frac{೨}{೩}$ದ = ೧೦ .... .... .... .... .... .... (೧)

ಮತ್ತು $\frac{೧}{೪}$ಪ + $\frac{೧}{೩}$ದ = ೪ .... .... .... .... .... .... (೨)

(೨) ನೆಯದನ್ನು ೨ ರಿಂದ ಗುಣಿಸಿ, $\frac{೧}{೨}$ಪ + $\frac{೨}{೩}$ದ = ೮ .... (೩)

(೧) ನೆಯದರೊಳಗಿಂದ (೩) ನೆಯದನ್ನು ಕಳೆಯಲಾಗಿ,

$\frac{೧}{೪}$ಪ = ೨, ಆ. ಪ = ೮.

(೨) ನೆಯದರಲ್ಲಿ ಪ = ೮ ಎಂದು ಇಟ್ಟರೆ,

೨ + $\frac{೧}{೩}$ದ = ೪, ಅಂ. $\frac{೧}{೩}$ದ = ೨, ಆ. ದ = ೬.

**೮ ಸೇರು; ೬ ಸೇರು.**

ಉ ೩. ಒಂದು ಡೋಣಿಗೆ ಪ್ರವಾಹದ ದಿಕ್ಕಿನಲ್ಲಿ ೨೮ ಮೈಲುಗಳನ್ನು ಹೋಗಿ ವಿರುದ್ಧ ದಿಕ್ಕಿನಲ್ಲಿ ೨೪ ಮೈಲುಗಳನ್ನು ಹೋಗಲು ಆರು ತಾಸುಗಳು, ಮತ್ತು ಪ್ರವಾಹದ ದಿಕ್ಕಿನಲ್ಲಿ ೪೨ ಮೈಲುಗಳನ್ನು ಹೋಗಿ ತಿರುಗಿ ೩೦ ಮೈಲುಗಳನ್ನು ಬರಲು ೮ ತಾಸುಗಳು ಬೇಕಾಗುತ್ತವೆ; ಅದರೆ ಡೋಣಿಯ ಮತ್ತು ಪ್ರವಾಹದ ತಾಸಿನ ವೇಗವೆಷ್ಟು ?

ತಾಸಿಗೆ ಡೋಣಿಯ ಸ್ವಂತ ವೇಗವು ನ ಮೈಲುಗಳು ಮತ್ತು ಪ್ರವಾಹದ ವೇಗವು ಪ ಮೈಲುಗಳಿದ್ದರೆ, ಪ್ರವಾಹದ ದಿಕ್ಕಿನಲ್ಲಿ ಡೋಣಿಯು ತಾಸಿನಲ್ಲಿ ನ+ಪ ಮೈಲು ವೇಗದಿಂದ ಮತ್ತು ಅದರ ವಿರುದ್ಧ ದಿಕ್ಕಿನಲ್ಲಿ ನ−ಪ ಮೈಲು ವೇಗದಿಂದ ಹೋಗುವದು.

$$\therefore \frac{೨೮}{ನ+ಪ} + \frac{೨೪}{ನ-ಪ} = ೬ \quad \ldots (೧)$$

$$\text{ಮತ್ತು} \quad \frac{೪೨}{ನ+ಪ} + \frac{೩೦}{ನ-ಪ} = ೮ \quad (೨)$$

$$\text{೨ನೆಯದನ್ನು ೪ ರಿಂದ ಗುಣಿಸಿದರೆ,} \quad \frac{೧೬೮}{ನ+ಪ} + \frac{೧೨೦}{ನ-ಪ} = ೩೨$$

$$\text{ಮತ್ತು (೧) ನೆಯದನ್ನು ೬ ರಿಂದ ಗುಣಿಸಿದರೆ} \quad \frac{೧೬೮}{ನ+ಪ} + \frac{೧೪೪}{ನ-ಪ} = ೩೬$$

$$\text{ವ್ಯವಕಲನದಿಂದ} \quad \frac{೨೪}{ನ-ಪ} = ೪$$

$$\text{ಅಂ.} \; ನ-ಪ = ೬ \quad (೩)$$

(೧)ನೆಯದರಲ್ಲಿ ನ−ಪ = ೬ ಎಂದು ಹಾಕಿದರೆ,

$$\frac{೨೮}{ನ+ಪ} + ೪ = ೬, \quad \text{ಅಂ.} \; \frac{೨೮}{ನ+ಪ} = ೨,$$

ಅಂ. ನ+ಪ=೧೪ .... .... .... .... .... .... (೪)

(೩) ಮತ್ತು (೪) ಇವುಗಳನ್ನು ಕೂಡಿಸಿ, ೨ನ= ೨೦,

ಅಂ. ನ= ೧೦. ಮತ್ತು ನ+ಪ= ೧೪ ಇದ್ದುದರಿಂದ ಪ=೪.

ಡೋಣಿಯ ವೇಗವು ೧೦ ಮೈಲು; ಪ್ರವಾಹದ ವೇಗವು ೪ ಮೈಲು.

**ಉ.೪.** ೩೬ ಮೈಲು ಅಂತರದ ಮೇಲಿರುವ ಊರಿಗೆ ಹೊರಟ ಒಬ್ಬ ಗೃಹಸ್ಥನು ೨೭ ಮೈಲಿನ ಅಂತರವನ್ನು ಬಸ್ಸಿನಿಂದ ಮತ್ತು ಉಳಿದದ್ದನ್ನು ಕಾಲಿನಿಂದ, ಹೀಗೆ ಒಟ್ಟು ನಾಲ್ಕೂವರಿ ತಾಸುಗಳಲ್ಲಿ ಹೋಗುತ್ತಾನೆ. ಬಸ್ಸಿನ ವೇಗವು ಅವರ ಮೊದಲಿನ ವೇಗದ $\frac{೫}{೬}$ ಇದ್ದರೆ ಮತ್ತು ಅವನು ತಾನು ಕಾಲಿನಿಂದ ನಡೆದ ಅಂತರವನ್ನು ಕಾಲಿನ ವೇಗದ $\frac{೪}{೩}$ ಪಟ್ಟು ವೇಗದಿಂದ ನಡೆದಿದ್ದರೆ ೪ ತಾ. ೩ ಮಿ. ಗಳಲ್ಲಿ ಮುಟ್ಟುತ್ತಿದ್ದನು, ಆದರೆ ಬಸ್ಸಿನ ಮತ್ತು ಅವನು ನಡೆಯುವ ತಾಸಿನ ವೇಗವೆಷ್ಟು ?

ಬಸ್ಸಿನ ತಾಸಿನ ವೇಗವು ಬ ಮೈಲು ಮತ್ತು ಕಾಲಿನಿಂದ ನಡೆಯುವುದು ಪ ಮೈಲು ಇದ್ದರೆ, ಪ್ರಶ್ನೆಯಲ್ಲಿ ಹೇಳಿದಂತೆ

$\frac{೨೭}{ಬ} + \frac{೯}{ಪ} = \frac{೯}{೨}$, ೯ ರಿಂದ ಭಾಗಿಸಿದರೆ, $\frac{೩}{ಬ} + \frac{೧}{ಪ} = \frac{೧}{೨}$ .... (೧)

$$\text{ಮತ್ತು } \frac{೨೭}{\frac{೫}{೬}ಬ} + \frac{೯}{\frac{೪}{೩}ಪ} = ೪\frac{೩}{೬೦}$$

$$\therefore \frac{೨೭ \times ೬}{೫ಬ} + \frac{೯ \times ೩}{೪ಪ} = \frac{೮೧}{೨೦}$$

೨೭ ರಿಂದ ಭಾಗಿಸಿದರೆ, $\frac{೬}{೫ಬ} + \frac{೧}{೪ಪ} = \frac{೩}{೨೦}$

೨೦ ರಿಂದ ಗುಣಿಸಿ $\frac{೨೪}{ಬ} + \frac{೫}{ಪ} = ೩$ .... (೨)

(೧)ನೆಯದನ್ನು ೫ ರಿಂದ ಗುಣಿಸಲಾಗಿ $\frac{೧೫}{ಬ} + \frac{೫}{ಪ} = \frac{೫}{೨}$ .... (೩)

(೨)ನೆಯದೊಳಗಿಂದ (೩) ನೆಯದನ್ನು ಕಳೆದರೆ

$$\frac{೯}{ಬ} = \frac{೧}{೨}, \text{ ಅಂ. } ಬ = ೧೮.$$

(೧) ನೆಯದರಲ್ಲಿ ಬ = ೧೮ ಎಂದು ಇಟ್ಟರೆ,

$\frac{೩}{೧೮} + \frac{೧}{ಪ} = \frac{೧}{೨}$, ∴ $\frac{೧}{ಪ} = \frac{೧}{೨} - \frac{೧}{೬} = \frac{೧}{೩}$, ∴ ಪ = ೩.

ಬಸ್ಸಿನ ವೇಗವು ೧೮ ಮೈಲು; ನಡೆಯುವ ವೇಗವು ೩ ಮೈಲು.

**ಉ.೫.** ಒಂದು ಧಾರ್ಮಿಕ ಸಮಾರಂಭದ ಸಮಯದಲ್ಲಿ ನೆರೆದ ವೈದಿಕರಿಗೆ ಕೆಲವು ಹಣವನ್ನು ದಕ್ಷಿಣೆ ಎಂದು ಸರಿಯಾಗಿ ಹಂಚಲಾಯಿತು. ಅವರ ಸಂಖ್ಯೆಯು ೬೦ ಹೆಚ್ಚು ಇದ್ದರೆ ಪ್ರತಿಯೊಬ್ಬನಿಗೆ ೫ ರೂ. ಕಡಿಮೆ, ಮತ್ತು ೪೦ ಕಡಿಮೆ ಇದ್ದರೆ ಪ್ರತಿಯೊಬ್ಬನಿಗೆ ೫ ರೂ. ಹೆಚ್ಚು ದೊರೆಯುತ್ತಿದ್ದವು. ಹಾಗಾದರೆ ವೈದಿಕರು ಎಷ್ಟಿದ್ದರು? ಮತ್ತು ಪ್ರತಿಯೊಬ್ಬನಿಗೆ ಎಷ್ಟು ದಕ್ಷಿಣೆಯು ಸಿಕ್ಕಿತೆಂಬುದನ್ನು ಹೇಳಿರಿ.

ವೈದಿಕರ ಸಂಖ್ಯೆಯು ವ ಇದ್ದು ಪ್ರತಿಯೊಬ್ಬನಿಗೆ ದ ರೂ. ದಕ್ಷಿಣೆಯು ಸಿಕ್ಕಿದ್ದರೆ ವದ ರೂ.ದಕ್ಷಿಣೆಯನ್ನು ಹಂಚಲಾಯಿತೆಂಬ ಸಂಗತಿಯು ಸ್ಪಷ್ಟವಿದೆ. ಆದುದರಿಂದ ಪ್ರಶ್ನೆಯಲ್ಲಿ ಹೇಳಿದಂತೆ,

(ವ+೬೦)(ದ−೫) = ದವ .... .... .... .... .... (೧)

ಮತ್ತು (ವ−೪೦)(ದ+೫) = ದವ .... .... .... .... .... (೨)

ಒಂದನೆಯದರ ಮೇಲಿಂದ ದವ+೬೦ದ−೫ವ−೩೦೦ = ದವ.

∴ ೬೦ದ−೫ವ = ೩೦೦ .... .... .... .... .... (೩)

ಮತ್ತು (೨) ನೆಯದರ ಮೇಲಿಂದ ದವ−೪೦ದ+೫ವ−೨೦೦ = ದವ

∴ −೪೦ದ+೫ವ ೨೦೦ .... .... .... .... (೪)

(೩) ಮತ್ತು (೪) ಕೂಡಿಸಿದರೆ ೨೦ದ=೫೦೦, ∴, ದ = ೨೫.

೪ನೆಯದರಲ್ಲಿ ದ = ೨೫ ಎಂದು ಹಾಕಿದರೆ,

−೧೦೦೦+೫ವ = ೨೦೦, ∴. ೫ವ = ೧೨೦೦, ∴. ವ = ೨೪೦.

ವೈದಿಕರು, ೨೪೦; ಪ್ರತಿಯೊಬ್ಬನಿಗೆ ದಕ್ಷಿಣೆಯು ೨೫ ರೂ.

## ಪ್ರಶ್ನಸಂಗ್ರಹ ೩೫

೧. ಎರಡು ಅಂಕೆಗಳುಳ್ಳ ಒಂದು ಸಂಖ್ಯೆಗೆ ಅಂಕೆಗಳ ಬೇರೀಜಿನಿಂದ ಭಾಗಿಸಿದರೆ ಭಾಗಾಕಾರವು ೭ ಬರುತ್ತದೆ. ಮತ್ತು ಅಂಕೆಗಳ ವ್ಯುತ್ಕ್ರಮಗಳ

ಜೋಡಿಯ ಆ ವ್ಯುತ್ಕ್ರಮಗಳ ಗುಣಾಕಾರದ ಆರು ಪಟ್ಟು ಇರುತ್ತದೆ, ಆದರೆ ಆ ಸಂಖ್ಯೆಯು ಯಾವುದು ?

೨. ಬಾಳಪ್ಪನಾಯಿಕರು ತಮ್ಮಲ್ಲಿದ್ದ ಹಣದಲ್ಲಿಯ ಕೆಲವನ್ನು ೩½ ದರದ ಸರಕಾರಿ ಸಾಲಿನ ಶೇರುಪತ್ರಗಳನ್ನು ಕೊಳ್ಳುವದರಲ್ಲಿ, ಮತ್ತು ಉಳಿದದ್ದನ್ನು ೪½ ದರದ ಮುನಸಿಪಾಲಿಟಿಯ ಸಾಲಿನ ಶೇರುಪತ್ರಗಳನ್ನು ಕೊಳ್ಳುವದರಲ್ಲಿ ವೆಚ್ಚ ಮಾಡುತ್ತಾರೆ, ಮತ್ತು ಅದರಿಂದ ಅವರಿಗೆ ಪ್ರತಿವರ್ಷಕ್ಕೆ ೨೦೮೦ ರೂ. ಬಡ್ಡಿಯು ದೊರೆಯುತ್ತದೆ. ಹಾಗೆ ಮಾಡದೇ ಅವರು ತಮ್ಮ ಹಣವನ್ನು ಎರಡೂ ಶೇರುಪತ್ರಗಳಲ್ಲಿ ಸರಿಯಾಗಿ ವಿಭಾಗಿಸಿದ್ದರೆ, ಅವರ ವರ್ಷದ ಬಡ್ಡಿಯ ಉತ್ಪನ್ನವು ೯೦ ರೂ. ಗಳಿಂದ ಹೆಚ್ಚು ಆಗುತ್ತಿತ್ತು. ಆದರೆ ಅವರ ಬಳಿಯಲ್ಲಿ ಎಷ್ಟು ಹಣವಿತ್ತು, ಮತ್ತು ಅವರು ಅದನ್ನು ಪ್ರತಿಯೊಂದರಲ್ಲಿ ಎಷ್ಟೆಷ್ಟಿಟ್ಟಿದ್ದರು ಎಂಬುದನ್ನು ಹೇಳಿರಿ.

೩. ಒಬ್ಬ ವ್ಯಾಪಾರಸ್ಥನು ೩ ರೂ. ಗೆ ಒಂದರಂತೆ ೨೦೦ ಸಸಿಗಳನ್ನು ಕೊಂಡನು ಮತ್ತು ಅವುಗಳಲ್ಲಿ ಎರಡು ಗುಂಪುಗಳನ್ನು ಮಾಡಿ ಮೊದಲನೇ ಗುಂಪಿನಲ್ಲಿಯ ಸಸಿಗಳನ್ನು ಯಾವ ಭಾವದಿಂದ ಮಾರಿದನೋ ಅದಕ್ಕಿಂತ ಪ್ರತಿಯೊಂದಕ್ಕೆ ನಾಲ್ಕಾಣೆಗಳನ್ನು ಹೆಚ್ಚು ತೆಗೆದುಕೊಂಡು ಎರಡನೇ ಗುಂಪಿನೊಳಗಿನವುಗಳನ್ನು ಮಾರಿದನು, ಮತ್ತು ಆ ವ್ಯಾಪಾರದಲ್ಲಿ ಅವನಿಗೆ ೧೦೦ ಕ್ಕೆ ೨೦ ರಂತೆ ಲಾಭವಾಯಿತು. ಅವನು ಮೊದಲನೇ ಗುಂಪಿನೊಳಗಿನ ಸಸಿಗಳನ್ನು ಯಾವ ಭಾವದಿಂದ ಮಾರಿದನೋ ಅದಕ್ಕಿಂತ ಪ್ರತಿಯೊಂದಕ್ಕೆ ೪ ಆ. ಕಡಿಮೆ ತೆಗೆದುಕೊಂಡು, ಮತ್ತು ಎರಡನೆಯದರಲ್ಲಿಯ ಯಾವ ಭಾವದಿಂದ ಮಾರಿದ್ದನೋ ಅದಕ್ಕಿಂತ ೪ ಆ. ಹೆಚ್ಚು ತೆಗೆದುಕೊಂಡು ಮಾರಿದ್ದರೆ, ಅವನಿಗೆ ಮೊದಲು ಆದ ಲಾಭಕ್ಕಿಂತ ೧೦ ರೂ. ಕಡಿಮೆ ಲಾಭವಾಗುತ್ತಿತ್ತು. ಆದರೆ ಪ್ರತಿಯೊಂದು ಗುಂಪಿನಲ್ಲಿ ಎಷ್ಟು ಸಸಿಗಳಿದ್ದವು, ಮತ್ತು ಅವುಗಳಲ್ಲಿ ಪ್ರತಿಯೊಂದನ್ನು ಯಾವ ಭಾವದಿಂದ ಮಾರಿದನೆಂಬುದನ್ನು ಹೇಳಿರಿ.

೪. ರಾಮರಾಯರು ಒಂದು ಕುದುರೆಯನ್ನು ಮತ್ತು ಒಂದು ಗಾಡಿಯನ್ನು ಕೆಲವು ಹಣಕ್ಕೆ ಕೊಂಡುಕೊಂಡರು. ಕುದುರೆಗೆ ನೂ. ೧೫ ರಂತೆ ಹೆಚ್ಚು ಬೆಲೆಯನ್ನು ಮತ್ತು ಗಾಡಿಗೆ ನೂ. ೧೦ ರಂತೆ ಕಡಿಮೆ ಬೆಲೆಯನ್ನು ಕೊಡಬೇಕಾಗಿದ್ದರೆ ಒಟ್ಟು ೧೦೦ ರೂ. ಹೆಚ್ಚು ಹಣವು ಖರ್ಚು ಆಗುತ್ತಿತ್ತು.

೩೬೦ ಚೌ. ಫು. ಗಳಿಂದ, ಮತ್ತು ಉದ್ದಳತೆಯು ೫ ಫೂಟು ಕಡಿಮೆ ಇದ್ದು ಅಗಲಳತೆಯು ೫ ಫೂಟು ಹೆಚ್ಚು ಇದ್ದರೆ ಕ್ಷೇತ್ರಫಲವು ೧೭೫ ಚೌ. ಫೂ-ಗಳಿಂದ ಹೆಚ್ಚಾಗುತ್ತಿತ್ತು. ಆದರೆ ಅದರ ಉದ್ದಳತೆ ಮತ್ತು ಅಗಲಳತೆಗಳನ್ನು ಹೇಳಿರಿ ?

೧೦. ಒಂದು ಶಾಲೆಯಲ್ಲಿಯ ೧೦ನೇ ಇಯತ್ತೆಯಲ್ಲಿಯ ಮೊದಲನೇ ವರ್ಗದಲ್ಲಿಯ ನಾಲ್ಕು ಹುಡುಗರನ್ನು ಎರಡನೇ ವರ್ಗದಲ್ಲಿ ಹಾಕಿದರೆ ಮೊದ-ಲನೆಯದರಲ್ಲಿ ಎರಡನೆಯದರ ೩ರಷ್ಟು ಹುಡುಗರಾಗುವವು, ಆದರೆ ಎರಡನೆ-ಯದರಲ್ಲಿಯ ೨ ಹುಡುಗರನ್ನು ಮೊದಲನೆಯದರಲ್ಲಿ ಹಾಕಿದರೆ ಎರಡರ-ಲ್ಲಿಯೂ ಸಮಾನ ಸಂಖ್ಯೆಗಳಾಗುವವು, ಆದರೆ ಪ್ರತಿಯೊಂದು ವರ್ಗದಲ್ಲಿ ಎಷ್ಟು ಹುಡುಗರಿರುವರು ?

೧೧. ಎರಡು ಅಂಕೆಗಳುಳ್ಳ ಒಂದು ಸಂಖ್ಯೆಯು ಅಂಕೆಗಳ ಬೇರೀಜಿನ ಆರು ಪಟ್ಟು ಇರುತ್ತದೆ. ಅಂಕೆಗಳನ್ನು ಅದಲುಬದಲು ಮಾಡಿ ಆಗುವ ಸಂಖ್ಯೆಯು ಅಂಕೆಗಳ ಬೇರೀಜಿನ ಐದು ಪಟ್ಟು ಆಗುವದೆಂದು ಸಿದ್ಧಮಾಡಿರಿ.

೧೨. ಮಾವಿನಹಣ್ಣಿನ ದರವು ಡಝನ್ನಿಗೆ ೮ಆ. ಇಳಿದ ಮೇಲೆ ಹೋದವಾರದಲ್ಲಿ ಕೆಲವು ಹಣಕ್ಕೆ ಸಿಕ್ಕಿದ ಹಣ್ಣುಗಳು ಅದರ ಹಿಂದಿನವಾರದಲ್ಲಿ ಸಿಕ್ಕ ಹಣ್ಣುಗಳಿಗಿಂತ ೩ ಡಝನ ಹಣ್ಣುಗಳು ಹೆಚ್ಚು ಸಿಕ್ಕಿವು, ಮತ್ತು ಈ ವಾರದಲ್ಲಿ ದರವು ಮತ್ತೂ ೮ಆ. ಇಳಿದದ್ದರಿಂದ ಅಷ್ಟೇ ಹಣದಲ್ಲಿ ಹೋದ ವಾರದಗಿಂತ ಒಂದು ಡಝನ್ ಹಣ್ಣುಗಳು ಹೆಚ್ಚು ಸಿಕ್ಕವು ಆದರೆ ಪ್ರತಿ ವಾರದಲ್ಲಿ ಅವನು ಎಷ್ಟು ಹಣದ ಮಾವಿನಹಣ್ಣುಗಳನ್ನು ಕೊಂಡನು, ಮತ್ತು ಮೊದಲನೆಯ ದರವು ಎಷ್ಟಿತ್ತೆಂಬುದನ್ನು ಹೇಳಿರಿ.

೧೩. ಒಬ್ಬ ಹಣ್ಣು ಮಾರುವವನ ಬಳಿಯಲ್ಲಿ ಕೆಲವು ಮೋಸಂಬೀ ಹಣ್ಣುಗಳು ಮತ್ತು ಅವುಗಳಿಗಿಂತ ೮ ಹೆಚ್ಚು ಕಿತ್ತಳೆ ಹಣ್ಣುಗಳಿದ್ದವು. ಅವನು ಮೋಸಂಬೀ ಹಣ್ಣುಗಳನ್ನು ಕಿತ್ತಳೆ ಹಣ್ಣುಗಳಿಗಿಂತ ಪ್ರತಿಯೊಂದಕ್ಕೆ ೩ ಆಣೆ ಹೆಚ್ಚು ದರದಿಂದ ಮಾರುತ್ತಾನೆ ಮತ್ತು ಹಣ್ಣುಗಳನ್ನು ಮಾರಿದ ನಂತರ ಎರಡೂ ತರದ ಹಣ್ಣುಗಳ ಮಾರಾಟದ ಬೆಲೆಗಳು ಒಂದೇ ಇದ್ದುದು ಅವನಿಗೆ ಕಂಡುಬರುತ್ತದೆ. ಅವನು ಕಿತ್ತಳೆ ಹಣ್ಣುಗಳನ್ನು ಮೋಸಂಬೀ ಹಣ್ಣುಗಳ ದರದಿಂದ ಮತ್ತು ಮೋಸಂಬಿಗಳನ್ನು ಕಿತ್ತಳೆ ಹಣ್ಣುಗಳ ದರದಿಂದ

ಲಾಭವೂ ಆಗುತ್ತಿರಲಿಲ್ಲ, ಇಲ್ಲವೆ ಹಾನಿಯಾದರೂ ಆಗುತ್ತಿರಲಿಲ್ಲ. ಆದರೆ ಆ ಗಡಿಯಾರಗಳ ಪ್ರತಿಯೊಂದರ ಮೂಲ ಬೆಲೆ ಎಷ್ಟು ?

೧೮. ಎರಡು ಅಂಕೆಗಳುಳ್ಳ ಒಂದು ಸಂಖ್ಯೆಗೆ ಅದೇ ಅಂಕೆಗಳುಳ್ಳ ಬೇರೆ ಸಂಖ್ಯೆಯಲ್ಲಿ ೨ ಕೂಡಿಸಿ ಬಂದ ಬೇರಿಜಿನಿಂದ ಭಾಗಿಸಿದರೆ ೩ ಬರುತ್ತದೆ, ಮತ್ತು ಆ ಎರಡೂ ಸಂಖ್ಯೆಗಳೊಳಗಿನ ಅಂತರಕ್ಕೆ ಅಂಕೆಗಳ ಬೇರೀಜಿನಿಂದ ಭಾಗಿಸಿದರೆ ಭಾಗಾಕಾರವು ೬ ಬರುತ್ತದೆ, ಆದರೆ ಆ ಸಂಖ್ಯೆಗಳಾವವು ?

೧೯. ಒಬ್ಬ ಬಣ್ಣಗಾರನು ಒಂದು ಬಣ್ಣದ ಕೆಲಸವನ್ನು ಅದು ಕೆಲವಷ್ಟು ದಿನಗಳಲ್ಲಿ ಮುಗಿಯುವದೆಂದು ಅಂದಾಜಿನಿಂದ, ಕೆಲವು ರಕಮಿಗೆ ಮಾಡಲು ಒಪ್ಪಿಕೊಂಡನು, ಆದರೆ ಕೆಲಸವನ್ನು ಮುಗಿಸಲು ೫ ದಿನಗಳು ಹೆಚ್ಚು ಹತ್ತಿದ್ದರಿಂದ ಅವನಿಗೆ ಅಪೇಕ್ಷಿಸಿದಗಿಂತ ದಿನಕ್ಕೆ ೧ರೂ. ಕಡಿಮೆ ಸಿಕ್ಕಿತು. ಕೆಲಸಕ್ಕೆ ಅಪೇಕ್ಷಿಸಿದಗಿಂತ ೪ ದಿನಗಳು ಕಡಿಮೆ ಹತ್ತಿದ್ದರೆ ಅವನಿಗೆ ದಿನಕ್ಕೆ ೧। ರೂ. ಹೆಚ್ಚು ಸಿಗುತ್ತಿತ್ತು. ಆದರೆ ಕೆಲಸವನ್ನು ಮುಗಿಸಲು ಎಷ್ಟು ದಿನಗಳು ಬೇಕಾದವು, ಮತ್ತು ಅವನಿಗೆ ಎಷ್ಟು ಹಣ ಸಿಕ್ಕಿತು ?

೨೦. ಎರಡು ಸಂಖ್ಯೆಗಳೊಳಗಿನ ಅಂತರದಿಂದ ೮೦ಕ್ಕೆ ಭಾಗಿಸಿ ಬಂದ ಭಾಗಾಕಾರದೊಳಗಿಂದ ಆ ಸಂಖ್ಯೆಗಳ ಬೇರೀಜಿನಿಂದ ೮೦ಕ್ಕೆ ಭಾಗಿಸಿ ಬಂದ ಭಾಗಾಕಾರವನ್ನು ಕಳೆದರೆ ಶೇಷವು ೭ ಉಳಿಯುತ್ತದೆ. ಮತ್ತು ಆ ಸಂಖ್ಯೆಗಳ ಬೇರೀಜಿನಿಂದ ೧೨೦ಕ್ಕೆ ಭಾಗಿಸಿ ಬಂದ ಭಾಗಾಕಾರದೊಳಗಿಂದ ಅಂತರದಿಂದ ೨೪ಕ್ಕೆ ಭಾಗಿಸಿ ಬಂದ ಭಾಗಾಕಾರವನ್ನು ಕಳೆದರೆ ಶೇಷವು ೩ ಉಳಿಯುತ್ತದೆ, ಆದರೆ ಆ ಸಂಖ್ಯೆಗಳಾವವು ?

೨೧. ಒಂದು ಪಾತ್ರೆಯಲ್ಲಿ ಹಾಲು ಮತ್ತು ನೀರು ೪:೧ ಈ ಪ್ರಮಾಣದಲ್ಲಿ ಕೂಡಿಸಿದೆ, ಪ್ರತಿಯೊಂದು ಪಾತ್ರೆಯೊಳಗಿನ ಎಷ್ಟು ಮಿಶ್ರಣವನ್ನು ತೆಗೆದುಕೊಂಡು ಅದನ್ನು ಒಟ್ಟು ಕೂಡಿಸಿದರೆ ಅದರಲ್ಲಿ ಹಾಲು ೨೨ ಸೇರು ಮತ್ತು ನೀರು ೭ ಸೇರು ಆಗುವದು ?

೨೨. ಎರಡು ಅಂಕೆಗಳುಳ್ಳ ಒಂದು ಸಂಖ್ಯೆಗೆ ಅವುಗಳ ಬೇರೀಜಿನಿಂದ ಭಾಗಿಸಲಾಗಿ ಭಾಗಾಕಾರವು ೪ ಬಂದು ಶೇಷವು ೩ ಉಳಿಯುವದು. ಮತ್ತು ಆ ಸಂಖ್ಯೆಯಲ್ಲಿ ೩೬ ಕೂಡಿಸಿದರೆ ಆ ಸಂಖ್ಯೆಯೊಳಗಿನ ಅಂಕೆಗಳ ಅದಲು-ಬದಲಾಗುತ್ತದೆ. ಆದರೆ ಆ ಸಂಖ್ಯೆಯು ಯಾವುದು ?

ಕೆಲವಷ್ಟು ಇಳುಕಲದಿರುತ್ತದೆ. ಒಬ್ಬ ಗೃಹಸ್ಥನು ಹೋಗುವ ಸಮಯದಲ್ಲಿ ಆ ಅಂತರವನ್ನು ೪ ತಾಸು ೪೦ ಮಿನಿಟುಗಳಲ್ಲಿ ನಡೆಯುತ್ತಾನೆ, ಮತ್ತು ತಿರುಗಿ ಬರುವ ಸಮಯದಲ್ಲಿ ಅವನಿಗೆ ೧೫ ಮಿ. ಹೆಚ್ಚು ಬೇಕಾಗುತ್ತವೆ. ಅವನ ಏರಿಕೆಯ ಮೇಲಿನ, ಸಪಾಟ ನೆಲದ ಮೇಲಿನ ಮತ್ತು ಇಳುಕಲಿನಲ್ಲಿ ನಡೆಯುವ ಸರಾಸರಿ ತಾಸಿನ ವೇಗವು ಅನುಕ್ರಮವಾಗಿ ೩ಮೈ; ೩ಮೈ; ಮತ್ತು ೪ ಮೈಲು ಇದ್ದರೆ, ದಾರಿಯು ಎಷ್ಟು ಭಾಗವು ಸಪಾಟವಿದೆ ಎಂಬುದನ್ನು ಹೇಳಿರಿ.

೨೯. ಒಬ್ಬ ಗೃಹಸ್ಥನು ತನ್ನ ಮನೆಯಿಂದ ಬೆಳಿಗ್ಗೆ ೭ ಗಂಟೆಗೆ ಹೊರಟು ತಾಸಿಗೆ ೪ ಮೈಲಿನಂತೆ ನಡೆದು ನೆರೆಯಲ್ಲಿರುವ ಊರಿಗೆ ಕೆಲಸಕ್ಕಾಗಿ ಹೋದನು. ಮತ್ತು ಅಲ್ಲಿ ಅರ್ಧ ತಾಸಿದ್ದು ತಿರುಗಿ ಮನೆಗೆ ಬರುವ ಸಮಯದಲ್ಲಿ ಮೊದಲು ಕೆಲವಷ್ಟು ಅಂತರವನ್ನು ಸಾಯಕಲ್ ಮೇಲಿಂದ ತಾಸಿಗೆ ಸರಾಸರಿ ೧೦ ಮೈಲು ವೇಗದಿಂದ ಮತ್ತು ಉಳಿದದ್ದನ್ನು ಮೊದಲಿನಂತೆ ನಡೆಯುತ್ತ ಬಂದನು. ಮನೆಗೆ ಬಂದ ಮೇಲೆ ಅವನಿಗೆ ೯ ಹೊಡೆದು ೩೪ ಮಿ. ಗಳಾದದ್ದು ಕಂಡುಬಂದಿತು, ಅವನ ನಡೆಯುವ ವೇಗವು ತಾಸಿಗೆ ೩ ಮೈಲು ಮತ್ತು ಸಾಯಕಲ್ಲಿನ ವೇಗವು ೮ ಮೈಲು ಇದ್ದರೆ ಅವನು ೧೦ ಹೊಡೆದು ೪೦ ಮಿ. ಗಳಲ್ಲಿ ಮನೆಗೆ ತಿರುಗಿ ಬರುತ್ತಿದ್ದನು. ಆದರೆ ಅವನ ಮನೆಯಿಂದ ಆ ಊರಿನ ಅಂತರವೆಷ್ಟು ?

೩೦. ಬಲಗಡೆಯ ಅಂಕೆಯು ಶೂನ್ಯವಿರುವ ಒಂದು ಮೂರು ಅಂಕೆಗಳುಳ್ಳ ಸಂಖ್ಯೆಯಲ್ಲಿ ಎಡಬದಿಯ ಅಂಕೆ ಮತ್ತು ನಡುವಿನ ಅಂಕೆ ಇವುಗಳ ಅದಲುಬದಲನ್ನು ಮಾಡಿದರೆ ಸಂಖ್ಯೆಯು ೧೮೦ ರಿಂದ ಕಡಿಮೆಯಾಗುತ್ತದೆ. ಮತ್ತು ಎಡಬದಿಯ ಅಂಕೆಯ ಅರ್ಧವನ್ನು ಮಾಡಿ ನಡುವಿನ ಅಂಕೆ ಮತ್ತು ಬಲಬದಿಯ ಅಂಕೆ ಇವುಗಳ ಅದಲುಬದಲನ್ನು ಮಾಡಿದರೆ ಸಂಖ್ಯೆಯು ೪೫೪ ರಿಂದ ಕಡಿಮೆಯಾಗುತ್ತದೆ, ಆದರೆ ಆ ಸಂಖ್ಯೆ ಯಾವುದು ?

೩೧. ವಿಧಿ ಮಂಡಲದ ಚುನಾವಣೆಯಲ್ಲಿ ಒಂದು ಮತದಾರ ಸಂಘದ ಒಂದು ಜಾಗೆಗಾಗಿ ಇಬ್ಬರು ಉಮೇದವಾರರು ನಿಂತಿದ್ದರು. ಆರಿಸಿ ಬಂದ ಉಮೇದವಾರನಿಗೆ ದೊರೆತ ಮತಗಳಲ್ಲಿ ೩೪೮೦ ಮತಗಳು ಎರಡನೇ ಉಮೇದವಾರನಿಗೆ ಬಿದ್ದಿದ್ದರೆ ಎರಡನೇ ಉಮೇದವಾರನು ೧೫೨ ಮತಗಳನ್ನು ಹೆಚ್ಚು ಪಡೆದು ಆರಿಸಿ ಬರುತ್ತಿದ್ದನು, ಮತ್ತು ಅವನಿಗೆ ಒಟ್ಟು ಮತದಾನದಲ್ಲಿಯ ೧೯

ಮತಗಳು ಆಗ ದೊರೆತ ಮತಗಳಿಗಿಂತ ಹೆಚ್ಚು ದೊರೆತಿದ್ದರೆ, ಇಬ್ಬರಿಗೂ ಸಮಾನ ಮತಗಳು ದೊರೆಯುತ್ತಿದ್ದುವು, ಹಾಗಾದರೆ ಪ್ರತಿಯೊಬ್ಬನಿಗೆ ಎಷ್ಟು ಮತಗಳು ದೊರೆತುವು ?

೩೨. ಒಂದು ಅಪೂರ್ಣಾಂಕದಲ್ಲಿಯ ಅಂಶ ಮತ್ತು ಛೇದ ಇವೆರಡೂ ೨ ರಿಂದ ಕಡಿಮೆ ಮಾಡಿದ್ದರೆ ಅದರ ಬೆಲೆಯು ⅓ ಆಗುತ್ತದೆ, ಮತ್ತು ೧ ರಿಂದ ಹೆಚ್ಚಿಸಿದರೆ ½ ಆಗುತ್ತದೆ, ಆದರೆ ಆ ಅಪೂರ್ಣಾಂಕವು ಯಾವುದು ?

೩೩. ಎರಡು ಅಂಕಿಗಳುಳ್ಳ ಒಂದು ಸಂಖ್ಯೆಗೆ ಅಂಕಿಗಳ ಬೇರೀಜಿನಿಂದ ಭಾಗಿಸಿದರೆ ಭಾಗಾಕಾರವು ೬ ಬರುತ್ತದೆ. ಮತ್ತು ಅದರೊಳಗಿಂದ ೯ ಕಳೆದರೆ ಅದರ ಅಂಕಿಗಳು ಅದಲು ಬದಲಾಗುತ್ತವೆ. ಆದರೆ ಆ ಸಂಖ್ಯೆಯು ಯಾವುದು ?

೩೪. ಎರಡು ಅಂಕಿಗಳುಳ್ಳ ಒಂದು ಸಂಖ್ಯೆಗೆ ಅಂಕಿಗಳ ಗುಣಾಕಾರದಿಂದ ಭಾಗಿಸಿದರೆ ಭಾಗಾಕಾರವು ೨⅔ ಬರುತ್ತದೆ. ಮತ್ತು ಸಂಖ್ಯೆಯಲ್ಲಿಯ ಅಂಕಿಗಳನ್ನು ಅದಲು ಬದಲು ಮಾಡಿ ಅದಕ್ಕೆ ಭಾಗಿಸಿದರೆ ೩ ಬರುತ್ತದೆ. ಹಾಗಾದರೆ ಆ ಸಂಖ್ಯೆಯು ಯಾವುದು ?

ದ್ವಿವರ್ಣ ಸಮೀಕರಣಗಳಂತೆಯೇ ಮೂರು ಇಲ್ಲವೆ ಹೆಚ್ಚು ವರ್ಣಗಳುಳ್ಳ ಸಮೀಕರಣಗಳನ್ನು ಕೊಟ್ಟಿದ್ದರೆ ಅವುಗಳನ್ನು ಬಿಡಿಸಿ ಅವ್ಯಕ್ತಗಳ ಮಾನಗಳನ್ನು ಹೇಳಲು ಬರುವದು. ಆದರೆ ಶಿಕ್ಷಣ ಖಾತೆಯು ಹಾಕಿಕೊಟ್ಟ ಇಲ್ಲವೆ ಎಸ್. ಎಸ್. ಸಿ, ಪರೀಕ್ಷಾ ಮಂಡಲವು ನೇಮಿಸಿದ ಅಭ್ಯಾಸ ಕ್ರಮದಲ್ಲಿ ಇಂಥ ಸಮೀಕರಣಗಳ ಸಮಾವೇಶವನ್ನು ಮಾಡಿಲ್ಲ. ಆದಕಾರಣ ಅವುಗಳ ವಿಚಾರವನ್ನು ಇಲ್ಲಿ ಮಾಡಿಲ್ಲ.

# ಏಳನೆಯ ಪ್ರಕರಣ

## ಆಲೇಖ

### ೧.

೭೧. ಹಿಂದಿನ ನಾಲ್ಕು ಇಯತ್ತೆಗಳಲ್ಲಿ ಅಂಕಗಣಿತದ ಅಭ್ಯಾಸವನ್ನು ಮಾಡುತ್ತಿರಲು ಆಲೇಖದ (Graph) ವಿಷಯದಲ್ಲಿ ಬಹಳಷ್ಟು ಜ್ಞಾನವು ನಮಗೆ ಆಗಿರುವದು. ಆರನೇ ಇಯತ್ತೆಯಲ್ಲಿ ಇದ್ದಾಗ್ಗೆ ಜನಸಂಖ್ಯೆ, ಶಾಲೆಯಲ್ಲಿಯ ಉಪಸ್ಥಿತಿ, ಗುಣ, ಮೂಲೋದ್ಯೋಗ, ಬೆಳೆಗಳು, ಜನ್ಮ ಮುಂತಾದವುಗಳಬಗ್ಗೆ ಸ್ತಂಭಾಲೇಖಗಳನ್ನು ಹೇಗೆ ಓದುವದು ಮತ್ತು ಹೇಗೆ ತೆಗೆಯುವದು, ಮತ್ತು ಅದರಂತೆಯೇ ವಸ್ತುಗಳ ವಾರದಲ್ಲಿಯ ಇಲ್ಲವೆ ತಿಂಗಳಿನ ದಿನಗಳು, ಮುಂತಾದವುಗಳನ್ನು ಆಲೇಖ ಸ್ವರೂಪದಲ್ಲಿ ಹೇಗೆ ಮಂಡಿಸುವದೆಂಬುದನ್ನು ನಾವು ಕಲಿತೆವು. ಮುಂದೆ ಏಳನೆ ಇಯತ್ತೆಯಲ್ಲಿ ಜನಸಂಖ್ಯೆಯ ಬೆಳವಣಿಗೆ ಶಾಲೆಯಲ್ಲಿಯ ಹುಡುಗರ ಸಂಖ್ಯೆ, ಹುಡುಗರ ಎತ್ತರಕತ್ತೆ ಮತ್ತು ತೂಕ, ಮೂಲೋದ್ಯೋಗಗಳೊಳಗಿನ ಪ್ರಗತಿಯು, ಸರಕುಗಳ ಬೆಲೆಗಳು ಮುಂತಾ-ದವುಗಳ ವಿಷಯದಲ್ಲಿ **ರೇಖಾಲೇಖಗಳನ್ನು** ಹೇಗೆ ಓದುವದು ಮತ್ತು ಹೇಗೆ ತೆಗೆಯುವದೆಂಬುದನ್ನು ನಾವು ನೋಡಿದೆವು. ಎಂಟನೇ ಇಯತ್ತೆಯಲ್ಲಿ ಇರಬೇಕಾದರೆ ಇಂಚು ಮತ್ತು ಸೆಂಟಿಮಿಟರ, ರೂಪಾಯಿಗಳು ಮತ್ತು ಪೌಂಡುಗಳು ಇಲ್ಲವೆ ಡಾಲರುಗಳು . ಇವುಗಳ ಪರಸ್ಪರ ಸಂಬಂಧವನ್ನು ತೋರಿಸುವ ರೂಪಾಂತರಾಲೇಖ ವಿಷಯದ ಜ್ಞಾನವನ್ನು ಮಾಡಿಕೊಂಡೆವು. ಹೋದವರ್ಷ ಒಂಬತ್ತನೇ ಇಯತ್ತೆಯಲ್ಲಿ ಪ್ರವಾಸದ ವಿಷಯದಲ್ಲಿ ರೇಖಾ-ಲೇಖಗಳನ್ನು ಹೇಗೆ ತೆಗೆಯುವದು ಮತ್ತು ಹೇಗೆ ಓದುವದೆಂಬುದನ್ನು ನಾವು ನೋಡಿದೆವು. ಅದಕ್ಕನುಸರಿಸಿಯೇ ಈಗ ನಾವು ಮುಂದಿನ ಮಾರ್ಗವನ್ನು ಆಕ್ರಮಿಸೋಣ, ಮತ್ತು ಆಲೇಖದ ವಿಷಯದಲ್ಲಿ ಇನ್ನೂ ಹೆಚ್ಚು ಜ್ಞಾನವನ್ನು ಗಳಿಸೋಣ.

**೭೨. ನಮ್ಮ ಊರ ಹತ್ತರ ಒಂದು ಉಗಿಬಂಡಿಯ ದಾರಿಯು ಹೋಗುತ್ತಿದ್ದು ದಿನಾಲು ಕೆಳಗಿನ ದಿಕ್ಕಿನಿಂದ ಬರುವ ಒಂದು ಉಗಿ-ಬಂಡಿಯು ಮಧ್ಯಾಹ್ನದ ಪೂರ್ವದಲ್ಲಿ ನಮ್ಮ ಊರಿಗೆ ಬಂದು**

ಮೇಲ್ಗಡೆಗೆ ಹೋಗುತ್ತದೆ. ಮಧ್ಯಾಹ್ನದಲ್ಲಿ ೧೨ ಗಂಟೆಗೆ ಆ ಗಾಡಿಯು ನಮ್ಮ ಊರಿನಿಂದ ೧೦೦ ಮೈಲು ಅಂತರದ ಮೇಲಿರುವ ಊರಿನಲ್ಲಿದ್ದರೆ ಮತ್ತು ಅದರ ಓಡುವ ಸರಾಸರಿ ವೇಗವು ತಾಸಿಗೆ ೪೦ ಮೈಲು ಇದ್ದರೆ, ಹನ್ನೆರಡು ಗಂಟೆಯ ನಂತರ ಯಾವಾಗಾದರೂ, ಅದು ನಮ್ಮ ಊರಿನಿಂದ ಎಷ್ಟು ಅಂತರದ ಮೇಲಿರುವದು, ಎಂಬುದನ್ನು ತಿಳಿಯಬೇಕಾಗಿದೆಯೆಂದು ಕಲ್ಪಿಸಿರಿ. ಇದನ್ನು ತೋರಿಸುವ ಆಲೇಖವು ಮುಂದೆ ತೋರಿಸಿದಂತೆ ಇರುವದು. ಇಲ್ಲಿ ೧೨ ಗಂಟೆಯ ತರುವಾಯದ ಅವಧಿಯನ್ನು ಅಡ್ಡಗೆರೆಯ ಮೇಲೆ ತೋರಿಸಿದೆ. ಮತ್ತು ನಮ್ಮ ಊರಿನಿಂದ ಮೈಲುಗಳಲ್ಲಿರುವ ಅಂತರವನ್ನು ಉದ್ದಗೆರೆಯ ಮೇಲೆ ತೋರಿಸಿದೆ. ಸರಿಯಾಗಿ ಹನ್ನೆರಡು ಗಂಟೆಗೆ ಆ ಗಾಡಿಯು ೧೦೦ ಮೈಲಿನ ಅಂತರದ ಮೇಲಿರುತ್ತದೆ, ಒಂದು ಗಂಟೆಗೆ ೧೪೦ ಮೈಲು ಅಂತರದ ಮೇಲಿರುವದು, ೨ ಗಂಟೆಗೆ ೧೮೦ ಮೈಲು ಅಂತರದ ಮೇಲಿರುವದು, ಮತ್ತು ೫ ಗಂಟೆಗೆ ೩೦೦ ಮೈಲು ಅಂತರದ ಮೇಲಿರುವದು ಎಂಬ ಸಂಗತಿಯನ್ನು ಲಕ್ಷ್ಯದಲ್ಲಿಟ್ಟು ನಾವು ಈ ಆಲೇಖವನ್ನು ತೆಗೆದಿದ್ದೇವೆ. ಮತ್ತು ಅದರ ಮೇಲಿಂದ ಯಾವ ಸಮಯದಲ್ಲಿ ಗಾಡಿಯು ಎಲ್ಲಿರುವದು ಮತ್ತು ಅದರಂತೆಯೇ ಯಾವದಾದರೊಂದು ನಿಶ್ಚಿತ ಸ್ಥಳದಲ್ಲಿ ಅದು ಎಷ್ಟು ಗಂಟೆಗೆ ಇರುವದೆಂಬುದನ್ನು ನಮಗೆ ಹೇಳಲು ಬರುವದು.



ಆಲೇಖ ಕ್ರ. ೧.

ಈಗ ಹನ್ನೆರಡು ಗಂಟೆಯ ಪೂರ್ವದಲ್ಲಿ ಯಾವದಾದರೊಂದು ನಿಶ್ಚಿತ ಸ್ಥಳದಲ್ಲಿ ಅದು ಎಲ್ಲಿರುವದು, ನಮ್ಮ ಊರಿನ ಮೇಲಿಂದ ಅದು ಯಾವಾಗ ಹೋಗುವದು ಮೊದಲಾದ ಸಂಗತಿಗಳು ಮೇಲಿನ ಆಲೇಖದ ಮೇಲಿಂದ ತಿಳಿದು ಬರುವದಿಲ್ಲ. ಅವುಗಳನ್ನು ಹೇಗೆ ತಿಳಿದುಕೊಳ್ಳುವದು? ಇಲ್ಲಿ ಆವ ಈ ರೇಷೆಯು ೧೨ ಗಂಟೆಯ ತರುವಾಯದ ವೇಳೆಯನ್ನು ತೋರಿಸುತ್ತದೆ. ಆದರೆ ೧೨ ಗಂಟೆಯ ಪೂರ್ವದ ವೇಳೆಯನ್ನು ತೋರಿಸುವದಿಲ್ಲ. ಅದಕ್ಕಾಗಿ

ಏನು ಮಾಡುವದು? ಧನ-ಋಣ ಸಂಖ್ಯೆಗಳನ್ನು ತೋರಿಸುವ ಕೆಲಸದಲ್ಲಿ ಸರಳ ರೇಷೆಗಳು ಹೇಗೆ ಉಪಯೋಗಿಸಲ್ಪಡುತ್ತವೆಂಬುದನ್ನು ನಾವು ಹಿಂದೆ (ಭಾ. ೧. ಪ್ರ. ೬.) ಎಂಟನೇ ಇಯತ್ತೆಯಲ್ಲಿದ್ದಾಗ್ಗೆ ನೋಡಿದ್ದೇವೆ. ಆ ಇದು ಆರಂಭ-ಸ್ಥಾನವೆಂದು ಕಲ್ಪಿಸಿ ಅವ ಈ ರೇಷೆಯನ್ನು ನಾವು ವಿರುದ್ಧ ದಿಕ್ಕಿನಲ್ಲಿ ಬೆಳೆಸಿದರೆ (ಪೂರ್ವದ ದಿಕ್ಕಿನಲ್ಲಿ) ಅದು ಬಲಬದಿಗೆ ಹೇಗೆ ನಾವು ೧೨ ಗಂಟೆಯ ತರುವಾಯದ




ಕ್ರ. ೨.

ವೇಳೆಯನ್ನು ತೋರಿಸುತ್ತೇವೋ ಅದರಂತೆಯೇ ೧೨ ಗಂಟೆಯ ಪೂರ್ವ-ದಲ್ಲಿಯ ವೇಳೆಯನ್ನು ನಮ್ಮ ನಿತ್ಯದ ಸಂಕೇತದಂತೆ, ಎಡಬದಿಗೆ ತೋರಿಸಲು ಬರುವದು ಮತ್ತು ಗಾಡಿಯು ೧ ತಾಸು ಮೊದಲು (೧೧ ಗಂಟೆಗೆ) ನಮ್ಮ ಊರಿನಿಂದ ೬೦ ಮೈಲಿನ ಅಂತರದಲ್ಲಿ ಮತ್ತು ಎರಡು ತಾಸುಗಳ ಪೂರ್ವದಲ್ಲಿ (೧೦ ಗಂಟೆಗೆ) ೨೦ ಮೈಲಿನ ಅಂತರದಲ್ಲಿರುವದು, ಮೊದಲಾದ ಸಂಗತಿಗಳನ್ನು ಲಕ್ಷ್ಯದಲ್ಲಿಟ್ಟರೆ ಆಲೇಖವು ಮೇಲೆ ತೋರಿಸಿದ ಸ್ವರೂಪವನ್ನು ಇರುವದು.

ಮೇಲಿನ ಆಲೇಖದ ಮೇಲಿಂದ ಗಾಡಿಯು ೧೨ ಗಂಟೆಗಿಂತ ೨॥ ತಾಸು ಮೊದಲು ಅಂ. ೯॥ ಗಂಟೆಗೆ ನಮ್ಮ ಊರಿಗೆ ಬಂದದ್ದು ಕಂಡುಬರುತ್ತದೆ, ಮತ್ತು ಆ ಸಮಯದಿಂದ ಅದು ಯಾವಾಗ ಎಲ್ಲಿರುವದೆಂಬುದು ತಿಳಿಯುತ್ತದೆ. ಆದರೆ ಗಾಡಿಯು ಇದಕ್ಕಿಂತ ಸ್ವಲ್ಪ ಹೊತ್ತು ಮೊದಲೇ ಕೆಳಗಡೆಯಿಂದ ಹೊರಟಿದೆ. ಅದು ೯॥ ಗಂಟೆಯ ಮೊದಲು ವಿರುದ್ಧ ದಿಕ್ಕಿನಲ್ಲಿತ್ತು. ಆದರ

ಸಾಯಂಕಾಲ ೫ ಗಂಟೆಗೆ ನಮ್ಮ ಊರಿನಿಂದ ಮೇಲ್ಗಡೆಗೆ ೨೦೦ ಮೈಲುಗಳಷ್ಟು ಮುಕ್ಕಾಮಿನ ಊರಿಗೆ ಹೋಗುತ್ತದೆಯೆಂದು ತಿಳಿದರೆ ಮೇಲಿನ ಆ ರೇಖೆಯು ಗಾಡಿಯು ಮೂಲ ಸ್ಥಳದಿಂದ ಹೊರಟಾಗಿನಿಂದ ಮುಕ್ಕಾಮಿನ ಊರಿಗೆ ಮುಟ್ಟುವ ತನಕ ಅದರ ಪ್ರವಾಸದ ರೇಖೆಯಲ್ಲಿ ನಮ್ಮ ಊರಿನಿಂದ ೧೨ ಗಂಟೆಯ ಮೊದಲು ಇಲ್ಲವೆ ತರುವಾಯವಾಗಲಿ ಯಾವಾಗ ಯಾವ ದಿಕ್ಕಿನಲ್ಲಿ ಎಷ್ಟು ಅಂತರದ ಮೇಲಿರುತ್ತದೆಂಬುದನ್ನು ತೋರಿಸುತ್ತದೆ.

ಮೇಲಿನ ಆಲೇಖದ ಕಡೆಗೆ ನೋಡಿದರೆ **ವ್ರಅವ** ಮತ್ತು **ಮುಅಮು** ಈ ರೇಷೆಗಳು ಆಲೇಖವನ್ನು ನಾಲ್ಕು ಭಾಗಗಳಲ್ಲಿ ವಿಭಾಗಿಸುತ್ತವೆ, ಮತ್ತು ಆಲೇಖವು ಮೂರನೇ ಭಾಗದಲ್ಲಿ ಪ್ರಾರಂಭವಾಗಿ ಅದು ಎರಡನೇ ಭಾಗದೊಳಗಿಂದ ಹಾಯ್ದು ಮೊದಲನೇ ಭಾಗದಲ್ಲಿ ಹೋಗುತ್ತದೆಂದು ಕಂಡುಬರುವದು.

ಮೇಲಿನ ಉದಾಹರಣೆಯಲ್ಲಿ ಗಾಡಿಯು ೧೨ ಗಂಟೆಯ ಮೊದಲು ಇಲ್ಲವೆ ತರುವಾಯ ನಮ್ಮ ಊರಿನಿಂದ ಯಾವಾಗ್ಗೆ ಯಾವ ದಿಕ್ಕಿನಲ್ಲಿ ಎಷ್ಟು ಅಂತರದ ಮೇಲೆ ಇರುತ್ತದೆಂದು ಹೇಳುವ **ಸೂತ್ರ**ವನ್ನಾದರೂ ನಮಗೆ ಬರೆಯಲು ಬರುವದು. ೧೨ ಗಂಟೆಯ ತರುವಾಯದ ಕಾಲ (ತಾಸುಗಳಲ್ಲಿ) **ವ** ಈ ಪದದಿಂದ ಮತ್ತು ನಮ್ಮ ಊರಿನಿಂದ ಮುಕ್ಕಾಮದ ದಿಕ್ಕಿನಲ್ಲಿಯ ಅಂತರವನ್ನು (ಮೈಲುಗಳಲ್ಲಿ) **ಮು** ಈ ಪದದಿಂದ ತೋರಿಸಿದರೆ, ಗಾಡಿಯು ೧೨ ಗಂಟೆಗೆ ನಮ್ಮ ಊರಿನಿಂದ ಮುಕ್ಕಾಮದ ದಿಕ್ಕಿನಲ್ಲಿ ೧೦೦ ಮೈಲು ಅಂತರದ ಮೇಲಿರುವದರಿಂದ ಮತ್ತು ಅದರ ಸರಾಸರಿ ವೇಗವು ತಾಸಿಗೆ ೪೦ ಮೈಲು ಇರುವದರಿಂದ **ಮು**=೧೦೦+೪೦ **ವ** ಈ ಸೂತ್ರವು ಗಾಡಿಯು ಯಾವ ಸಮಯದಲ್ಲಿ ಎಲ್ಲಿರುವದೆಂಬುದನ್ನು ತೋರಿಸುತ್ತದೆ. ಉದಾಹರಣೆಗಾಗಿ,

ನಮ್ಮ ಊರಿಗೆ ಗಾಡಿಯು ಬಂದಾಗ **ಮು** = ೦, ಆದುದರಿಂದ ೧೦೦+೪೦ **ವ**=೦, ಅಂ. ೪೦ **ವ** = —೧೦೦ ಅಂ. **ವ**= —೨½ ಅಂ. ಗಾಡಿಯು ೧೨ ಗಂಟೆಯ ೨½ ತಾಸು ಮೊದಲು ಅಂ. ಬೆಳಿಗ್ಗೆ ೯½ ಗಂಟೆಗೆ ನಮ್ಮ ಊರಿಗೆ ಬರುತ್ತದೆ.

ಗಾಡಿಯು ಮೂಲ ಹೊರಡುವ ಸ್ಥಳವು ನಮ್ಮ ಊರಿನಿಂದ—೧೦೦ ಮೈಲು ಅಂತರದ ಮೇಲಿದೆ, ಆದುದರಿಂದ ಗಾಡಿಯು ಹೊರಡುವ ಸಮಯದಲಿ

ಮ = ೧೦೦, ಆದುದರಿಂದ—೧೦೦=೧೦೦ + ೪೦ ವ, ಅಂ. ೪೦ ವ= —೨೦೦, ಅಂ. ವ = —೫.

∴ ಗಾಡಿಯು ೧೨ ಗಂಟೆಯ ಮೊದಲು ೫ ತಾಸು, ಅಂ. ಬೆಳಿಗ್ಗೆ ೭ ಗಂಟೆಗೆ ಹೊರಡುತ್ತದೆ.

ಅದರಂತೆಯೇ ಗಾಡಿಯು ಕೊನೆಯ ಮುಕ್ಕಾಮದ ಸ್ಥಳಕ್ಕೆ ಮುಟ್ಟುವಾಗ ಮ = ೩೦೦, ∴ ೩೦೦, = ೧೦೦ + ೪೦ ವ, ಅಂ. ೪೦ ವ=೨೦೦, ಅಂ. ವ=೫ ∴ ಗಾಡಿಯು ಸಾಯಂಕಾಲ ೫ ಗಂಟೆಗೆ ಮುಕ್ಕಾಮದ ಸ್ಥಳಕ್ಕೆ ಮುಟ್ಟುತ್ತದೆ.

ಇದರ ಮೇಲಿಂದ ಸ್ಪಷ್ಟವಿರುವ ಸಂಗತಿಯೇನೆಂದರೆ ೧೨ ಗಂಟೆಯ ತರುವಾಯದ ವೇಳೆ ಮತ್ತು ಮಧ್ಯಾಹ್ನದಿಂದಿರುವ ಅಂತರ ಇವುಗಳೊಳಗಿನ ಪರಸ್ಪರ ಸಂಬಂಧವನ್ನು ೩ ನೇ ನಂಬರದ ಆಲೇಖವು ತೋರಿಸುತ್ತದೆ. ಅದೇ ಸಂಬಂಧವನ್ನು ಮ = ೧೦೦ + ೪೦ ವ ಈ ಸೂತ್ರವೂ ಸಹ ತೋರಿಸುತ್ತದೆ. ಇದರ ಅರ್ಥವೇನೆಂದರೆ, ಮ = ೧೦೦ + ೪೦ ವ ಇದು ಆ **ಆಲೇಖದ ಸಮೀಕರಣ**ವಿರುತ್ತದೆ, ಮತ್ತು ಆ **ಆಲೇಖವು** ಮ = ೧೦೦ + ೪೦ ವ ಈ ಸಮೀಕರಣದ **ಆಲೇಖ**ವಿರುತ್ತದೆ.

೭೩. ಈಗ ಎರಡನೇ ಉದಾಹರಣೆಯನ್ನು ನೋಡಿರಿ.

**೩೦ ತಿಂಗಳ ಮೊದಲು ತಮ್ಮ ಅಭ್ಯಾಸ ಕ್ರಮವನ್ನು ಮುಗಿಸಿ ಸ್ವತಃ ಗಳಿಸಲಿಕ್ಕೆ ಹತ್ತಿದನಂತರ ಪ್ರತಿ ತಿಂಗಳ ತನ್ನ ಆದಾಯದೊಳಗಿಂದ ೨೦೦ ರೂ. ಗಳನ್ನು ತೆಗೆದು ಇಡುವದೆಂದು ವಸಂತ ರಾಯರು ನಿಶ್ಚಯಿಸಿದರು. ಮತ್ತು ಅದರಂತೆ ಅವರು ನಿಯಮಿತ ರೀತಿಯಿಂದ ಮಾಡುತ್ತ ಬಂದಿರುವರು. ಪ್ರಾರಂಭದಲ್ಲಿ ಆ ಉಳಿತಾಯವನ್ನು ತಾನು ವಿದ್ಯಾಭ್ಯಾಸದ ಸಲುವಾಗಿ ಮಾಡಿದ ಸಾಲವನ್ನು ತೀರಿಸಲು ವೆಚ್ಚ ಮಾಡಿದ್ದರೆ ಮತ್ತು ಇಂದು ಅವರ ಬಳಿಯಲ್ಲಿ ೨೦೦ ರೂ ಉಳಿತಾಯವಿದ್ದರೆ ಅವರ ಉಳಿತಾಯದ ಹಣವನ್ನು ತೋರಿಸುವ ಆಲೇಖವನ್ನು ತೆಗೆಯಿರಿ.**

ಮುಂದಿನ ಆಲೇಖದಲ್ಲಿ ಆಕ ಈ ಅಡ್ಡಗೆರೆಯು ಈ ಮುಂದಿನ ಕಾಲವನ್ನು ತೋರಿಸುತ್ತದೆ. ಮತ್ತು ಆಸ ಈ ಉದ್ದರೇಷೆಯು ಕೂಡಿಸಿದ ಹಣವನ್ನು ತೋರಿಸುತ್ತದೆ, ಮತ್ತು ಆಲೇಖವು ಇಂದಿನಿಂದ ಮುಂದೆ ಅವರ ಬಳಿಯಲ್ಲಿ ಎಷ್ಟು

ಶಿಲುಕಿರುತ್ತದೆಂಬುದನ್ನು ತೋರಿಸುತ್ತದೆ, ಆದರೆ ಈ ಮೊದಲೇ ಯಾವಾಗ ಎಷ್ಟು ಶಿಲಕಿತ್ತೆಂಬುದನ್ನು ಅದು ಹೇಳುವದಿಲ್ಲ. ಅದಕ್ಕಾಗಿ ಆಕ ಈ ರೇಷೆಯನ್ನು ವಿರುದ್ಧ ದಿಕ್ಕಿನಲ್ಲಿ ಬೆಳಿಸಬೇಕಾಗುವದು, ತರುವಾಯ ಆಲೇಖವು ಮುಂದೆ ತೋರಿಸಿದಂತೆ ಇರುವದು.




ಆಲೇಖ ಕ್ರ. ೪.

ಈ ಆಲೇಖದ ಮೇಲಿಂದ (ಕ್ರ. ೫) ಸ್ಪಷ್ಟ ಕಂಡುಬರುವದೇನಂದರೆ ವಸಂತರಾಯರು ಪ್ರಾರಂಭದಿಂದ ನಿಯಮಿತವಾಗಿ ಪ್ರತಿ ತಿಂಗಳಿಗೆ ೨೦೦ ರೂ.




ಆಲೇಖ ಕ್ರ. ೫

ತೆಗೆದಿಟ್ಟರೂ ಸಾಲವನ್ನು ತೀರಿಸುವದಿದ್ದುದರಿಂದ ಅವರ ಬಳಿಯಲ್ಲಿ ಕಳೆದ ೧೦ ತಿಂಗಳಲ್ಲಿಯೇ ಪ್ರತ್ಯಕ್ಷ ಹಣವು ಕೂಡಹತ್ತಿತು. ಆ ಮೊದಲಿನ ತಲುಕು ಸಾಲವನ್ನು ತೀರಿಸುವದಕ್ಕಾಗಿ ವೆಚ್ಚ ಆಗುತ್ತಿತ್ತು. ಪ್ರತಿ ತಿಂಗಳ ಸಾಲವು ೨೦೦ ರೂ.ಗಳಿಂದ ಕಡಿಮೆ ಆಗುತ್ತಲಿದೆ. ಈ ಪರಿಸ್ಥಿತಿಯನ್ನು ಆಲೇಖವು ತೋರಿಸಲಾರದೇ? ಅಥ ಈ ಕೂಡಿಸಿದ ಹಣವನ್ನು ತೋರಿಸುವ ರೇಷೆಯನ್ನು ಕೆಳಗೆ ವಿರುದ್ಧ ದಿಕ್ಕಿನಲ್ಲಿ ಎಳೆದು ಆ ಲೇಖವನ್ನು ಪೂರ್ಣ ಮಾಡಿದರೆ ಅದು ಮುಂದೆ ತೋರಿಸಿದಂತೆ ಇರುವದು. ಮತ್ತು ಆ ಆಲೇಖದ ಮೇಲಿಂದ (ಕ್ರ.೬) ನಮಗೇನು ಕಾಣುಬರುತ್ತದೆ?

ಪ್ರಾರಂಭದಲ್ಲಿ ಸರಿಯಾಗಿ ೩೦ ತಿಂಗಳುಗಳ ಹಿಂದೆ, ಅವರಿಗೆ ೪೦೦೦ ರೂ. ಸಾಲವಿತ್ತು. (**ಕೂಡಿಸಿದ ಹಣ**—೪೦೦೦ ರೂ.). ಪ್ರತಿ ತಿಂಗಳ ಅದು




ಆಲೇಖ ಕ್ರ. ೬.

೨೦೦ ರೂ.ಗಳಂತೆ ಇಳಿಯುತ್ತ ಹೋಗಿ ೧೦ ತಿಂಗಳುಗಳ ಹಿಂದೆ ಅದು ನಿಃಶೇಷವಾಯಿತು, ಅಂದರೆ ಅವರು ಋಣಮುಕ್ತರಾದರು. (**ಕೂಡಿಸಿದ ಹಣ**, ೦ ರೂ.). ಇಂದು **ಕೂಡಿಸಿದ ಹಣ**, + ೨೦೦೦ ರೂ. ಇನ್ನೂ ೩೦ ತಿಂಗಳುಗಳ ನಂತರ **ಕೂಡಿಸಿದ ಹಣ** = (೨೦೦೦ + ೩೦ × ೨೦೦) ರೂ. = ೮೦೦೦ ರೂ. ಕೂಡಿಸಿದ ಹಣ, ಮತ್ತು ಇಂದಿನಿಂದ ಮುಂದೆ ಆಗಿರುವ ಅವಧಿಯು ಇವುಗಳ ಪರಸ್ಪರ ಸಂಬಂಧವನ್ನು ಸೂತ್ರರೂಪದಿಂದ ವ್ಯಕ್ತ-ಪಡಿಸುವದಿದ್ದರೆ, ಕೂಡಿಸಿದ ಹಣ (ರೂಪಾಯಿಗಳಲ್ಲಿ) ಮತ್ತು ಇಂದಿನಿಂದ ಮುಂದೆ ಆಗುವ ಅವಧಿ (ತಿಂಗಳುಗಳಲ್ಲಿ) ಇವುಗಳ ನಿರ್ದೇಶವನ್ನು ಅನುಕ್ರಮ-ವಾಗಿ **ಸ** ಮತ್ತು ಕ ಈ ವರ್ಣಗಳಿಂದ ಮಾಡಿದರೆ, ಅವರ ಬಳಿಯಲ್ಲಿ ಇಂದು ೨೦೦೦ ರೂ. ಇದ್ದುದರಿಂದ ಮತ್ತು ಪ್ರತಿ ತಿಂಗಳ ಅವರು ೨೦೦ ರೂ. ಶಿಲ್ಕು ಇಡುವದರಿಂದ, **ಸ** = ೨೦೦೦ + ೨೦೦ **ಕ** ಎಂದು ಆ ಸಮೀಕರಣವಿರುವದು.

**ಕ** = ೦ ಇದ್ದಾಗ **ಸ** = ೨೦೦೦. ಅಂದರೆ ಇಂದಿಗೆ ಕೂಡಿಸಿದ ಹಣವು ೨೦೦೦ ರೂ.

ಕ = ೩೦ ಇದ್ದಾಗ ಸ = ೨೦೦೦ + ೬೦೦೦ = ೮೦೦೦, ಅಂದರೆ ೩೦ ತಿಂಗಳುಗಳ ತರುವಾಯ ಕೂಡಿಸಿದ ಹಣವು ೮೦೦೦ ರೂ. **ಕ** = −೩೦ ಇದ್ದಾಗ **ಸ** = ೨೦೦೦ − ೬೦೦೦ = −೪೦೦೦, ಅಂದರೆ ಸರಿಯಾಗಿ ೩೦ ತಿಂಗಳುಗಳ ಹಿಂದೆ ಕೂಡಿಸಿದ ಹಣವು −೪೦೦೦ ರೂ. ಅಂದರೆಯೇ ಸಾಲ **೪೦೦೦ ರೂ.**

ಮೇಲಿನ ಎಲ್ಲ ಸಂಗತಿಗಳ ಮೇಲಿಂದ ಮುಂದಿನ ಸಂಗತಿಗಳು ಸ್ಪಷ್ಟ-ವಾಗುವವು. ಕ್ರ. ೬ನೇ ಆ ಲೇಖವು ಯಾವ ಸಂಗತಿಗಳನ್ನು ತೋರಿಸುತ್ತ-ದೆಯೋ ಅವೇ ಸಂಗತಿಗಳನ್ನು **ಸ** = ೨೦೦೦ + ೨೦೦ಕ ಈ ಸಮೀಕರಣ-ವಾದರೂ ಹೇಳುತ್ತದೆ. **ಸ = ೨೦೦೦ + ೨೦೦ಕ** ಇದು ಆ ಆಲೇಖದ **ಸಮೀಕರಣ**ವಿದ್ದು ಅದು ಈ **ಸಮೀಕರಣದ ಆಲೇಖ**ವೆಂದು ಇದರ ಅರ್ಥವಾಗುವದಿಲ್ಲವೇ?

**೨.**

**೭·೪.** ಹಿಂದಿನ ನಾಲ್ಕು ಇಯತ್ತೆಗಳಲ್ಲಿ ಯಾವ ಆಲೇಖಗಳನ್ನು ನಾವು ತೆಗೆದೆವೋ, ಓದಿದೆವೋ ಮತ್ತು ನೋಡಿದೆವೋ ಅವುಗಳಲ್ಲಿ ಋಣ

ಸಂಖ್ಯೆಗಳ ಸಂಬಂಧವು ಎಲ್ಲಿಯೂ ಇದ್ದಿಲ್ಲ. ಅಡ್ಡ ಮತ್ತು ಉದ್ದ ಇರುವ ಎರಡೂ ರೇಷೆಗಳು ಧನ ಸಂಖ್ಯೆಗಳನ್ನೇ ನಿರ್ದೇಶಿಸುತ್ತಿದ್ದವು. ಆದರೆ ಮೇಲಿನ ಎರಡೂ ಉದಾಹರಣೆಗಳಿಗೆ ಸಂಬಂಧಿಸಿದ ಯಾವ ಆಲೇಖಗಳನ್ನು ನಾವು ಕೊನೆಗೆ ತೆಗೆದೆವೋ (ಕ್ರ. ೩ ಮತ್ತು ಕ್ರ. ೬) ಅವುಗಳಲ್ಲಿ ಧನ ಸಂಖ್ಯೆಗಳಂತೆ ಋಣ ಸಂಖ್ಯೆಗಳ ಸಂಬಂಧವಾದರೂ ಬಂದಿರುವದು, ಮತ್ತು ಅಡ್ಡ ಮತ್ತು ಉದ್ದ ಗೆರೆಗಳು ಒಂದಕ್ಕೊಂದು ಛೇದಿಸಿ ಅನುಕ್ರಮವಾಗಿ ಆರಂಭ ಸ್ಥಾನದ ಎಡಬದಿಗೆ ಮತ್ತು ಕೆಳಬದಿಗೆ ಹೋಗುತ್ತಿರುವದರಿಂದ ಆಲೇಖ ಪತ್ರದ ನಾಲ್ಕು ಭಾಗಗಳಾಗಿವೆ. ಈ ಪ್ರತಿಯೊಂದು ಭಾಗಕ್ಕೆ **ಪಾದ** (Quadront) ವೆಂದು ಸಂಜ್ಞೆ ಇದ್ದು ಮುಂದಿನ ಆಕೃತಿಯಲ್ಲಿ (ಕ್ರ. ೭) ತೋರಿಸಿದಂತೆ ಅವುಗಳಿಗೆ ಕ್ರಮವಾಗಿ **ಪ್ರಥಮಪಾದ, ದ್ವಿತೀಯಪಾದ, ತೃತೀಯಪಾದ** ಮತ್ತು **ಚತುರ್ಥಪಾದ**ಗಳೆಂದು ಸಂಬೋಧಿಸಲ್ಪಡುತ್ತದೆ

ಇಲ್ಲಿ ಮುಂದೆ ಮಾರ್ಗವನ್ನು ಆಕ್ರಮಿಸುವ ಮೊದಲು ಆಲೇಖ ವಿಷಯದ ಸ್ವಲ್ಪ ಪರಿಭಾಷೆಯನ್ನು ತಿಳಿದುಕೊಳ್ಳುವಾ. **ಆಲೇಖವನ್ನು** ತೆಗೆಯುವದಿದ್ದಾಗ ನಾವು ಕಾಗದದ ಮೇಲೆ ಎಲ್ಲಿಯಾದರೂ ಅನುಕೂಲ ಸ್ಥಳದಲ್ಲಿ ಒಂದು ಬಿಂದುವನ್ನು ತೆಗೆದುಕೊಳ್ಳುತ್ತೇವೆ. ಮತ್ತು ಆ ಬಿಂದುವಿನೊಳಗಿಂದ ಹಾಯ್ದು ಹೋಗುವ ಮತ್ತು ಒಂದನ್ನೊಂದು ಕಾಟಕೋನದಲ್ಲಿ ಛೇದಿಸುವ, ಒಂದು ಅಡ್ಡ ಮತ್ತು ಇನ್ನೊಂದು ಉದ್ದ, ಹೀಗೆ ಎರಡು ಸರಳರೇಷೆಗಳನ್ನು ತೆಗೆದುಕೊಳ್ಳುತ್ತೇವೆ. ಈ ರೇಷೆಗಳಿಗೆ ಸಹನಿರ್ದೇಶಕಾಕ್ಷಗಳು ಇಲ್ಲವೆ **ಅಕ್ಷ**ಗಳೆಂದು ಸಂಜ್ಞೆ ಇದ್ದು, ಅಡ್ಡ (ಕ್ಷಿತಿಜ ಸಮಾಂತರ Horizontal) ಗೆರೆಗೆ **ಭುಜಾಕ್ಷ**ವೆಂದೂ ಮತ್ತು ಉದ್ದ (ಕ್ಷಿತಿಜ ಲಂಬ Vertical)ಗೆರೆಗೆ **ಕೋಟ್ಯಕ್ಷ**ವೆಂದೆನ್ನುತ್ತಾರೆ. ಈ ಅಕ್ಷಗಳ ಛೇದದಬಿಂದುವಿಗೆ **ಆರಂಭಸ್ಥಾನ** ಇಲ್ಲವೆ **ಪ್ರಸ್ಥಾನ**ಬಿಂದು ಎಂದೆನ್ನುತ್ತಾರೆ. ಮುಂದಿನ ಆಕೃತಿಯಲ್ಲಿ **ಆ** ಇದು **ಆರಂಭಸ್ಥಾನ**ವಿದ್ದು **ಕ್ಷಆಕ್ಷ** ಮತ್ತು **ಯಆಯ** ಇವು **ಅಕ್ಷ**ಗಳಿರುತ್ತವೆ. ಮೊದಲನೆಯದು **ಭುಜಾಕ್ಷ**ವಿದ್ದು ಎರಡನೆಯದು **ಕೋಟ್ಯಕ್ಷ**ವಿರುತ್ತದೆ. ಅವುಗಳ ಹೆಸರುಗಳ ಮೇಲಿಂದ ಅವುಗಳಿಗೆ **ಕ್ಷ**—ಅಕ್ಷ ಮತ್ತು **ಯ**—ಅಕ್ಷ ಎಂದು ಸಹ ನಾವು ಅನ್ನುತ್ತೇವೆ.

ಯಾವುದಾದರೊಂದು ಸ್ಥಳವು ಪ್ರಧಾನಯಾಮ್ಯೋತ್ತರ ವೃತ್ತದಿಂದ ಪೂರ್ವಕ್ಕೆ ಇಲ್ಲವೆ ಪಶ್ಚಿಮಕ್ಕೆ ಇಂತಿಷ್ಟು ಅಂತರದ ಮೇಲಿದ್ದು ವಿಷುವವೃತ್ತದ ಉತ್ತರಕ್ಕೆ ಇಲ್ಲವೆ ದಕ್ಷಿಣಕ್ಕೆ ಇಂತಿಷ್ಟು ಅಂತರದ ಮೇಲಿರುತ್ತದೆಂದು ಹೇಳಿದಾಗ್ಗ್ಯೆ, ಅಂದರೆಯೇ ಅದರ ಅಕ್ಷಾಂಶ ಮತ್ತು ರೇಖಾಂಶಗಳನ್ನು ಕೊಟ್ಟಿದ್ದರೆ ಅದನ್ನು ಹೇಗೆ ನಿಶ್ಚಯಿಸಲು ಬರುವದೋ, ಹಾಗೆಯೇ ಯಾವುದಾದರೊಂದು ಬಿಂದುವು ಕೋಟ್ಯಕ್ಷದಿಂದ ಬಲಗಡೆಗೆ ಇಲ್ಲವೆ ಎಡಗಡೆಗೆ ಎಷ್ಟು ಅಂತರದ ಮೇಲಿರುವದು ಮತ್ತು ಭುಜಾಕ್ಷದಿಂದ ಮೇಲೆ ಇಲ್ಲವೆ ಕೆಳಗೆ ಎಷ್ಟು ಅಂತರದ ಮೇಲಿರುವದೆಂಬುದು ತಿಳಿದರೆ ಆಲೇಖಪತ್ರದಲ್ಲಿ ಅದರ ಸ್ಥಾನವನ್ನು ನಿಶ್ಚಯಿಸಲು ಬರುವದು. ಹಾಗೆಯೆ ಯಾವುದಾದರೊಂದು ಸ್ಥಳವು ಎಲ್ಲಿದೆ ಎಂಬುದನ್ನು ತಿಳಿದುಕೊಳ್ಳುವದಕ್ಕಾಗಿ ಹೇಗೆ ನಾವು ಅಕ್ಷಾಂಶ ಮತ್ತು ರೇಖಾಂಶಗಳನ್ನು ಹೇಳುತ್ತೇವೋ, ಅದರಂತೆಯೇ ಯಾವುದಾದರೊಂದು ಬಿಂದುವು ಆಲೇಖಪತ್ರದ ಮೇಲೆ ಎಲ್ಲಿರುವದೆಂಬುದನ್ನು ತಿಳಿದುಕೊಳ್ಳುವದಕ್ಕಾಗಿ ಅಕ್ಷಗಳಿಂದಿರುವ ಅದರ ಅಂತರಗಳನ್ನು ನಾವು ಹೇಳುತ್ತೇವೆ. ನಮ್ಮ ನಿಶ್ಚಿತ ಸಂಕೇತದಿಂದ ನಾವು ಬಲಗಡೆಯ ಅಂತರಗಳನ್ನು ಧನ (+) ಮತ್ತು ಎಡಗಡೆಯವುಗಳನ್ನು ಋಣ (—); ಮತ್ತು ಮೇಲಿನವುಗಳನ್ನು ಧನ (+), ಕೆಳಗಿನವುಗಳನ್ನು ಋಣ (—) ಎಂದು ತಿಳಿಯುತ್ತೇವೆ.

ಯಾವುದೇ ಬಿಂದುವಿನ ಕೋಟ್ಯಕ್ಷದಿಂದ ಇರುವ ಅಂತರಕ್ಕೆ ಅದರ **ಭುಜಾಂತರ** ಇಲ್ಲವೆ ಅದರ **ಭುಜ**ವೆಂದೂ, ಮತ್ತು ಭುಜಾಕ್ಷದಿಂದಿರುವ ಅಂತರಕ್ಕೆ ಅದರ **ಕೋಟ್ಯಂತರ** ಇಲ್ಲವೆ ಅದರ **ಕೋಟಿ** ಎಂದೆನ್ನುತ್ತಾರೆ. ಮೊದಲನೆಯದನ್ನು ಭುಜಾಕ್ಷಕ್ಕೆ ಸಮಾಂತರವಿರುವಂತೆ ಅಳೆಯಲ್ಪಡುವದರಿಂದ ಮೊದಲನೆಯದಕ್ಕೆ **ಭುಜಾಂತರ** ಇಲ್ಲವೆ **ಭುಜ** ಮತ್ತು ಎರಡನೆಯದಕ್ಕೆ **ಕೋಟ್ಯಂತರ** ಇಲ್ಲವೆ **ಕೋಟಿ** ಎಂಬ ಸಂಜ್ಞೆಗಳು ಇರುತ್ತವೆ. ಧನ ಮತ್ತು ಋಣ ಸಂಖ್ಯೆಗಳ ವಿಷಯದ ಸಂಕೇತಗಳಿಗೆ ಅನುಸರಿಸಿ, ಬಲಗಡೆಯ ಭುಜಾಂತರಗಳು ಧನ (+) ಮತ್ತು ಎಡಗಡೆಯವು ಋಣ (—); ಹಾಗೂ ಮೇಲ್ಗಡೆಯ ಕೋಟ್ಯಂತರಗಳು ಧನ (+) ಮತ್ತು ಕೆಳಗಿನವು ಋಣ (—) ಸಂಖ್ಯೆಗಳಿಂದ ತೋರಿಸಲ್ಪಡುತ್ತವೆ.

ಯಾವುದಾದರೊಂದು ಬಿಂದುವಿನ ಅಕ್ಷಗಳಿಂದಿರುವ ಅಂತರಗಳಿಗೆ **ಸಹನಿರ್ದೇಶಕ**ಗಳೆಂದು ಸಂಜ್ಞೆ ಇರುತ್ತದೆ. ಈ ಸಹನಿರ್ದೇಶಕಗಳನ್ನು ಉಲ್ಲೇಖಿಸುವಾಗ ಭುಜಾಂತರವನ್ನು ಮೊದಲು ಮತ್ತು ಕೋಟ್ಯಂತರವನ್ನು ತರುವಾಯ ಉಲ್ಲೇಖಿಸುತ್ತಾರೆ. ಭುಜ (ಅಡ್ಡಿರುವ ಅಂತರ), ಕೋಟಿ (ಉದ್ದಿರುವ ಅಂತರ). ಈ ಕ್ರಮವನ್ನು ಬರೆಯುವ ಸಮಯದಲ್ಲಿ ಈ ಸಹ-ನಿರ್ದೇಶಕಗಳು ಕಂಸದಲ್ಲಿ ನಡುವೆ ಸ್ವಲ್ಪ ವಿರಾಮ ಚಿಹ್ನವನ್ನು ಉಪಯೋಗಿಸಿ




ಆಲೇಖ ಕ್ರ. ೨.

ಬರೆಯಲ್ಪಡುತ್ತವೆ. ಉದಾಹರಣೆಗೆ ಪ ಬಿಂದುವಿನ ಈ ಅಂತರಗಳು ೪ ಮತ್ತು ೫ ಮಾನಗಳು (Units) ಇದ್ದರೆ, ಅವುಗಳ ಉಲ್ಲೇಖವನ್ನು ನಾವು (೪, ೫) ಎಂದು ಮಾಡುತ್ತೇವೆ. ಫ (—೨. ೩) ಇದರ ಅರ್ಥವು ಫ ಈ ಬಿಂದುವಿನ ಭುಜ −೨ ಮಾನಗಳನ್ನು ಕೋಟಿಯು ೩ ಮಾನಗಳಿರುತ್ತವೆಯೆಂದು ಇರುವದು. ಇಲ್ಲಿ ೦.೧" ಈ ಮಾನವನ್ನು (Unit) ತೆಗೆದುಕೊಂಡಿದೆ. ಯಾವುದರ ಸಹ ನಿರ್ದೇಶಕಗಳು ಕೊಟ್ಟಿರುತ್ತವೆಯೋ ಅಂಥ ಬಿಂದುವನ್ನು ಆಲೇಖಪತ್ರದ ಮೇಲೆ ತೋರಿಸುವ ಕ್ರಿಯೆಗೆ **ಬಿಂದುಸ್ಥಾಪನ** ಇಲ್ಲವೆ

**ಸ್ಥಾಪನ ಮಾಡುವದು** (Plotting the point) ಎನ್ನುತ್ತಾರೆ. (ಮಾನ Unit ಈ ಅರ್ಥದಲ್ಲಿ ಏಕಾಂಕ ಎಂಬ ಶಬ್ದವನ್ನಾದರೂ ನಾವು ಉಪಯೋಗಿಸುತ್ತೇವೆ.)

ಮೇಲಿನ ಆಲೇಖದಲ್ಲಿ ಯಾವುದರ ಸಹನಿರ್ದೇಶಕಗಳು ಅನುಕ್ರಮವಾಗಿ (೪,೫),(—೨,೩), (—೬,—೮), (೧೦,—೭), ಇರುವವೋ ಇಂಥ ನಾಲ್ಕು ಬಿಂದುಗಳನ್ನು ಸ್ಥಾಪಿಸಿದ್ದು ಅವುಗಳಿಗೆ ಅನುಕ್ರಮವಾಗಿ **ಪ, ಫ, ಬ** ಮತ್ತು **ಮ** ಈ ಹೆಸರುಗಳನ್ನು ಕೊಟ್ಟಿದೆ. **ಫ, ಮ,** ಇವು (೨,೩),(೧೦, —೭) ಈ ಬಿಂದುಗಳೊಳಗಿಂದ ಹಾಯ್ದು ಹೋಗುವ ಸರಳರೇಷೆಯಿರುತ್ತದೆ.

ಮೇಲಿನ ಆಕೃತಿಯ ಕಡೆಗೆ ಲಕ್ಷ್ಯಗೊಟ್ಟು ನೋಡಿದರೆ ಕಂಡುಬರುವದೇನೆಂದರೆ ಮೊದಲನೇ **ಪಾದದಲ್ಲಿ** ಎರಡೂ ಸಹ ನಿರ್ದೇಶಕಗಳು ಧನ (+, +) ಎರಡನೆಯದರಲ್ಲಿ ಭುಜ, ಋಣ ಮತ್ತು ಕೋಟಿ ಧನ (—, +) ಮೂರನೆಯದರಲ್ಲಿ ಎರಡೂ ಋಣ (—, —). ಮತ್ತು ನಾಲ್ಕನೆಯದರಲ್ಲಿ ಭುಜ ಧನ ಮತ್ತು ಕೋಟಿ ಋಣ (+, —) ಇರುವವು.

ಬಿಂದುವನ್ನು ಸ್ಥಾಪಿಸುವದಕ್ಕಾಗಿ ಮತ್ತು ರೇಖಾಲೇಖವನ್ನು ತೆಗೆಯುವದಕ್ಕಾಗಿ ನೀವು ಸಾಧಾರಣವಾಗಿ ಒಂದಕ್ಕೊಂದು ಸಮಾನ ಅಂತರದ ಮೇಲಿರುವ ರೇಷೆಗಳಿಂದ ಎಳೆಯಲ್ಪಟ್ಟ ಮತ್ತು ಚೌಕೋನಗಳುಳ್ಳ ಕಾಗದವನ್ನು ಉಪಯೋಗಿಸುತ್ತೇವೆ. ಆಲೇಖ ಕ್ರ. ೧–೩ ಇವುಗಳಲ್ಲಿ ಈ ಚೌಕೋನಗಳು ಎಳೆದಿರುತ್ತವೆ. ಇಂಥ ಚೌಕೋನಗಳ ಕಾಗದವೇ ಬೇಕು, ಇಲ್ಲವಿದ್ದರೆ ಬಿಂದುವನ್ನು ಸ್ಥಾಪಿಸಲು ಬರಲಾರದು, ಅಥವಾ ಆಲೇಖವನ್ನು ತೆಗೆಯಲು ಬರಲಾರದೆಂದಲ್ಲ. ಮೇಲಿನ ಆಕೃತಿಯಲ್ಲಿ ತೋರಿಸಿದಂತೆ ಚೌಕೋನಗಳಿಲ್ಲದ ಸಾದಾ ಕಾಗದದ ಮೇಲೆಯೂ ಸಹ ಈ ಸಂಗತಿಗಳನ್ನು ತೋರಿಸಲು ಬರುವದು. ಅದರ ಅನುಕೂಲತೆಯ ಪ್ರಶ್ನೆ ಇರುವದು. ಚೌಕೋನಗಳುಳ್ಳ ಕಾಗದಗಳನ್ನು ಉಪಯೋಗಿಸುವದರಿಂದ ನಮ್ಮ ಕೆಲಸವು ಸುಲಭವಾಗುವದಲ್ಲದೆ ಅದನ್ನು ಬೇಗ ಮಾಡಲು ಬರುವದು. ಆದುದರಿಂದ ನಾವು ಅದನ್ನು ಉಪಯೋಗಿಸುತ್ತೇವೆ.

ಸಹನಿರ್ದೇಶಕಗಳನ್ನು ಕೊಟ್ಟಿದ್ದರೆ ಬಿಂದುಗಳನ್ನು ಸ್ಥಾಪಿಸುವ ಸುಲಭವಾದ ರೀತಿಯು ಹೀಗಿರುವದು. ಮೊದಲು ಆರಂಭ ಸ್ಥಾನದಿಂದ ಭುಜಾಂತರವನ್ನು ಭುಜಾಕ್ಷದ ಮೇಲೆ ಅಳೆಯಬೇಕು. ತರುವಾಯ ಆ ಬಿಂದುವಿನೊಳಗಿಂದ ಕೋಟ್ಯಾಕ್ಷಕ್ಕೆ ಸಮಾಂತರವಿರುವ ರೇಷೆಯ ಮೇಲೆ ಕೋಟ್ಯಂತರವನ್ನು

(ಮ) ಮತ್ತು ಮಧ್ಯಾಹ್ನದ ತರುವಾಯದ ವೇಳೆಯು (ವ) ಇವು ಒಂದರ-ಮೇಲೊಂದು ಅವಲಂಬಿಸಿರುವ ಸಂಗತಿಗಳಿದ್ದು ಅವುಗಳೊಳಗಿನ ಸಂಬಂಧ-ವನ್ನು **ಮ** = ೧೦೦ + ೪೦**ವ** ಈ ಸೂತ್ರವು ತೋರಿಸುತ್ತದೆಂಬುದನ್ನು ನಾವು ನೋಡಿದ್ದೇವೆ. ಇಲ್ಲಿ **ಮ** ದ ಬೆಲೆಯೆಂದರೆ ೧೦೦ + ೪೦**ವ** ಈ ರಾಶಿಯ ಬೆಲೆಯು ಮತ್ತು ಅದು ಪೂರ್ಣವಾಗಿ **ವ** ದ ಬೆಲೆಯ ಮೇಲೆ ಅವಲಂಬಿಸಿರು-ತ್ತದೆ. **ವ** ದ ಬೆಲೆಗಳಲ್ಲಿ ಹೇಗೇಗೆ ಬದಲಾವಣೆಯಾಗುತ್ತದೆಯೋ ಹಾಗಾಗೆ ೧೦೦ + ೪೦**ವ** ಈ ರಾಶಿಯ ಬೆಲೆಯಲ್ಲಿ ಅಂದರೆಯೇ **ಮ** ದ ಬೆಲೆಯಲ್ಲಾದರೂ ಬದಲಾವಣೆಯಾಗುತ್ತದೆ. ಕೆಳಗಿನ ಕೋಷ್ಟಕದ ಮೇಲಿಂದ ಈ ಸಂಗತಿಯು ಸ್ಪಷ್ಟವಾಗುವದು.

| | | | | | | | |
|---|---|---|---|---|---|---|---|
| **ವ**= | −೫ | −೪ | −೩ | −೨ | −೧ | ೦ | ೧ |
| **ಮ** ೧೦೦ + ೪೦**ವ**= | −೧೦೦ | −೬೦ | −೨೦ | ೨೦ | ೬೦ | ೧೦೦ | ೧೪೦ |
| **ವ**= | ೨ | ೩ | ೪ | ೫ | | | |
| **ಮ**=೧೦೦ + ೪೦**ವ**= | ೧೮೦ | ೨೨೦ | ೨೬೦ | ೩೦೦ | | | |

ಇಲ್ಲಿ **ವ** ದ ಬೆಲೆಯು ಹೇಗೆ ಬದಲಾಗುತ್ತದೆಯೋ ಹಾಗೆ ೧೦೦ + ೪೦ **ವ** ಈ ರಾಶಿಯದಾದರೂ ಅಂದರೆ **ಮ** ದ ಬೆಲೆಯೂ ಸಹ ಬದಲಾಗುತ್ತದೆ. ಆದರೆ **ವ** ದ ಪ್ರತಿಯೊಂದು ಬೆಲೆಗೆ ೧೦೦ + ೪೦ **ವ** ದ ಅಂ. **ಮ** ದ ನಿಶ್ಚಿತವಿರುವ ಯಾವುದಾದರೊಂದು ಬೆಲೆಯಿದೆ ಮತ್ತು ಅದು ಪೂರ್ಣವಾಗಿ **ವ** ದ ಬೆಲೆಯ ಮೇಲೆ ಅವಲಂಬಿಸಿರುತ್ತದೆ. ಹೀಗೆ ಇರುವಾಗ ಯಾವ ರಾಶಿಯ ಬೆಲೆಯು ಎರಡನೆ **ಚರ** (Variable) ಸಂಗತಿಯ ಬೆಲೆಯ ಮೇಲೆ ಅವಲಂಬಿಸಿರುತ್ತ-ದೆಯೋ ಆ ರಾಶಿಯು ಎರಡನೆಯದರ **ಫಲ** (Function) ವಿರುತ್ತದೆಂದೆನ್ನುತ್ತಾರೆ. ಇಲ್ಲಿ ೧೦೦ + ೪೦ **ವ** ಈ ರಾಶಿಯು **ವ** ದ **ಫಲ** ವಿರುವದು. ಈಗ ೧೦೦ + ೪೦ **ವ** ಅಂದರೆಯೇ **ಮ**, ಆದುದರಿಂದ **ಮ** ಇದು **ವ** ದ **ಫಲ**ವಿರು-ವದು. ಗಾಡಿಯು ಹೋಗುವ ಅಂತರವು ವೇಳೆಯ **ಫಲ** ವಿರುವದು.

ಕ್ರ. ೩ನೆಯ ಆಲೇಖವು ೧೦೦ + ೪೦**ವ** ಈ ರಾಶಿಯ (ಇಲ್ಲವೆ **ಫಲ** ದ) ಆಲೇಖ ಇಲ್ಲವೆ ಮ = ೧೦೦ + ೪೦**ವ** ಈ ಸಮೀಕರಣದ ಆಲೇಖವಿರುವದು. ಆ ಆಲೇಖದ ಕಡೆಗೆ ನೋಡಿದರೆ ಮೇಲಿನ ಕೋಷ್ಟಕದಲ್ಲಿಯ (−೫, −೧೦೦), .... — ಮೊ. ಎಲ್ಲ ಬಿಂದುಗಳು ಅದರ ಮೇಲಿದ್ದುದು ಕಂಡುಬರುವದು.

ಬೆಲೆಯ ಮೇಲೆ ಅವಲಂಬಿಸಿರುತ್ತದೆ. ಆದ್ದರಿಂದ ೨೦೦೦ + ೨೦೦ಕ ಈ ರಾಶಿಯು ಮತ್ತು ಆದುದರಿಂದಲೇ **ಸ** ಇದು **ಕ** ದ **ಫಲ** ವಿರುವದು.

ಕ್ರ. ೬ ನೇ ಆಲೇಖವು ೨೦೦೦ + ೨೦೦ **ಕ** ಈ ರಾಶಿಯ ಇಲ್ಲವೆ (**ಫಲದ**) ಆಲೇಖವು ಇಲ್ಲವೆ **ಸ** = ೨೦೦೦ + ೨೦೦ **ಕ** ಈ ಸಮೀಕರಣದ ಆಲೇಖವಿರುತ್ತದೆ, ಆ ಆಲೇಖದ ಕಡೆಗೆ ನೋಡಿದರೆ ಮೇಲಿನ ಕೋಷ್ಟಕದಲ್ಲಿ (−೩೦, −೪೦೦೦),.........ಮೊದಲಾದ ಎಲ್ಲ ಬಿಂದುಗಳು ಅದರ ಮೇಲಿದ್ದುದು ಕಂಡುಬರುತ್ತದೆ.

ಯಾವುಗಳ ಬೆಲೆಗಳು ಸ್ಥಿರವಿಲ್ಲದೆ ಬದಲಾಗುತ್ತ ಹೋಗುವವೋ ಅಂಥ ಸಂಖ್ಯೆಗಳಿಗೆ **ಚರಸಂಖ್ಯೆಗಳು** ಇಲ್ಲವೆ ಕೇವಲ **ಚರ**ಗಳೆಂದು ಸಂಜ್ಞೆ-ಯಿರುತ್ತದೆ. **ಮ**=೧೦೦ + ೪೦ **ವ**; ಮತ್ತು **ಸ**=೨೦೦೦ + ೨೦೦ **ಕ** ಇವುಗಳಲ್ಲಿ **ಮ, ವ, ಸ, ಕ** ಇವು **ಚರ** ಸಂಜ್ಞೆಗಳಿರುತ್ತವೆ. ಯಾವ **ಚರ**ಗಳ ಬೆಲೆಗಳ ಮೇಲಿಂದ ಬೇರೆ **ಚರ**ಗಳ ಬೆಲೆಗಳು ತೆಗೆಯಲ್ಪಡುತ್ತವೆಯೋ ಅವುಗಳಿಗೆ **ಸ್ವತಂತ್ರ** ಇಲ್ಲವೆ **ಸ್ವಾಧೀನ ಚರಗ**ಳೆಂದೂ, ಮತ್ತು ಯಾವುಗಳ ಬೆಲೆಗಳು ಮೊದಲನೇ ಚರಗಳ ಬೆಲೆಗಳ ಮೇಲಿಂದ ತೆಗೆಯಲ್ಪಡುತ್ತವೆಯೋ ಅವುಗಳಿಗೆ **ಪರತಂತ್ರ** ಇಲ್ಲವೆ **ಪರಾಧೀನ ಚರಗಳೆಂದೆ**ನ್ನುತ್ತಾರೆ. ಮೇಲಿನ ಸಮೀ-ಕರಣಗಳಲ್ಲಿ **ವ** ಮತ್ತು **ಕ** ಇವು **ಸ್ವತಂತ್ರ ಚರಗಳಿದ್ದು ಮ** ಮತ್ತು **ಸ** ಇವು **ಪರತಂತ್ರ ಚರಗಳಿರುತ್ತವೆ**. ಇಲ್ಲಿ **ಪರತಂತ್ರ ಚರವು ಸ್ವತಂತ್ರ ಚರದ ಫಲವಿರುತ್ತದೆಂಬು**ದನ್ನು ಮರೆಯಕೂಡದು.

೪ಕ್ಷ, ೩ಕ್ಷ − ೬, ೨ಕ್ಷ$^{೨}$ + ೫, ೮ಕ್ಷ$^{೩}$ + ೨ಕ್ಷ$^{೨}$ + ೭ಕ್ಷ$^{೨}$ + ಕ್ಷ − ೩,

$\frac{೯}{ಕ್ಷ}$ ೧ − $\frac{೩}{ಕ್ಷ}$ + $\frac{೫}{ಕ್ಷ^{೨}}$ ........

ಈ ಎಲ್ಲ ರಾಶಿಗಳು ಕ್ಷ ಈ **ಚರದ** ಫಲಗಳಿರುತ್ತವೆ. ಏಕೆಂದರೆ ಕ್ಷ ದ ಕೊಟ್ಟ ಬೆಲೆಯಿಂದ ಇವುಗಳೊಳಗಿನ ಪ್ರತಿಯೊಂದರ ನಿಶ್ಚಿತವಿರುವಂಥ ಬೆಲೆಯು ಬರುತ್ತದೆ, ಮತ್ತು ಕ್ಷ ದ ಬೆಲೆಯು ಹೇಗೆ ಬದಲಾಗುತ್ತ ಹೋಗುತ್ತದೆಯೋ ಹಾಗೆ ಇವುಗಳೊಳಗಿನ ಪ್ರತಿಯೊಂದರ ಬೆಲೆಯಾದರೂ ಬದಲಾಗುತ್ತ-ಹೋಗುತ್ತದೆ. ರಾಶಿಯ ಬೆಲೆಯ ನಿರ್ದೇಶವನ್ನು **ಯ** ದಿಂದ ಮಾಡಿದರೆ ಇವೇ **ಫಲ**ಗಳು ಯ = ೪ಕ್ಷ, ಯ = ೩ಕ್ಷ − ೬, ಯ = ೨ಕ್ಷ$^{೨}$ + ೫, ಯ = ೮ಕ್ಷ$^{೩}$

$+ ೫\text{ಕ್ಷ}^{೩} + \text{ಕ್ಷ} - ೩$, $\text{ಯ} = \frac{೯}{\text{ಕ್ಷ}}$, $\text{ಯ} = ೧ - \frac{೧}{\text{ಕ್ಷ}} + \frac{೫}{\text{ಕ್ಷ}^{೨}}$ .... ....

ಹೀಗೆ ಸಮೀಕರಣಗಳ ಸ್ವರೂಪವನ್ನಿಯೂ ಬರೆಯಲು ಬರುವವು. ಮತ್ತು ತರುವಾಯ ಆ ಸ್ಥಳದಲ್ಲಿ ಕ್ಷ ಇದು **ಸ್ವತಂತ್ರ ಚರ**ವಿದ್ದು ಯ ಇದು **ಪರತಂತ್ರ ಚರ**ವಿರುವದು.

೭·೬. ಈಗ ಯಾವದಾದರೊಂದು ಏಕಘಾತ ಏಕವರ್ಣ ರಾಶಿಯ (ಇಲ್ಲವೆ ಫಲದ) ಮತ್ತು ಅದರಂತೆಯೆ, ಏಕಘಾತ ದ್ವಿವರ್ಣ ಸಮೀಕರಣದ ಆಲೇಖವನ್ನು ಹೇಗೆ ತೆಗೆಯುವದೆಂಬುದನ್ನು ನೋಡುವಾ. **ಮಧ್ಯಾಹ್ನಕ್ಕೆ ಒಂದು ಗಾಡಿಯು ನಮ್ಮ ಊರಿನಿಂದ ಮೇಲ್ಗಡೆಗೆ ೧೨೦ ಮೈಲು ಅಂತರದ ಮೇಲಿದ್ದು ಅದು ನಮ್ಮ ಊರಿನ ದಿಕ್ಕಿನಲ್ಲಿಯೇ ತಾಸಿಗೆ ಸರಾಸರಿ ೩೦ ಮೈಲು ವೇಗದಿಂದ ಬರುತ್ತಲಿದೆ, ಆದರೆ ಅದು ನಮ್ಮೂರಿನಿಂದ ಯಾವ ವೇಳೆಗೆ ಎಷ್ಟು ಅಂತರದ ಮೇಲಿರುವದೆಂದು** ಪ್ರಶ್ನೆಯಿದೆ ಎಂದು ಕಲ್ಪಿಸಿರಿ. ನಮ್ಮ ಊರಿನಿಂದ ಮೈಲುಗಳಲ್ಲಿ ಯಾವ ಅಂತರವು ಇರುವದೋ ಅದರ ನಿರ್ದೇಶವನ್ನು **ಮ** ದಿಂದ ಮತ್ತು ೧೨ ಗಂಟೆಯ ನಂತರದ ವೇಳೆಯ ನಿರ್ದೇಶವನ್ನು (ತಾಸುಗಳಲ್ಲಿ) **ವ** ದಿಂದ ಮಾಡಿದರೆ, ೧೨ ಗಂಟೆಗೆ ಗಾಡಿಯು ೧೨೦ ಮೈಲು ಅಂತರದ ಮೇಲಿರುವದರಿಂದ ಮತ್ತು ಅದು ತಾಸಿಗೆ ೩೦ ಮೈಲು ವೇಗದಿಂದ ನಮ್ಮ ಊರಿನ ದಿಕ್ಕಿನಲ್ಲಿ ಬರುವದರಿಂದ, ನಮ್ಮ ಊರಿಂದಿರುವ ಅಂತರ ಮತ್ತು ೧೨ ಗಂಟೆಯ ತರುವಾಯದ ವೇಳೆ ಇವುಗಳೊಳಗಿನ ಸಂಬಂಧವನ್ನು ಸೂತ್ರರೂಪದಿಂದ **ಮ**=೧೨೦−೩೦**ವ** ಎಂದು ಬರೆಯಲು ಬರುವದು.

೧೨೦−೩೦**ವ** ಈ ರಾಶಿಯ ಆಲೇಖ ಮತ್ತು **ಮ**=೧೨೦−೩೦**ವ** ಈ ಸಮೀಕರಣದ ಆಲೇಖ ಇವೆರಡೂ ಒಂದೇ. ಇಲ್ಲಿ ೧೨೦−೩೦**ವ** ಈ ರಾಶಿಯ ಬೆಲೆಯು ಯಾವ ಸಮಯದಲ್ಲಿ ಯಾವದು ಇರುವದೋ ಅದನ್ನು **ಮ** ಈ ವರ್ಣದಿಂದ ವ್ಯಕ್ತಪಡಿಸಿದರೆ ೧೨೦−೩೦**ವ** ಈ ಏಕವರ್ಣ ಏಕಘಾತ ರಾಶಿಯ ಬದಲಾಗಿ **ಮ**=೧೨೦−೩೦**ವ** ಈ ಏಕಘಾತ ದ್ವಿವರ್ಣದ ಸಮೀಕರಣವು ಬರುತ್ತದೆ. ಏಕಘಾತ ಏಕವರ್ಣ ರಾಶಿಯ ಇಲ್ಲವೆ ಏಕಘಾತ ದ್ವಿವರ್ಣ ಸಮೀಕರಣದ ಆಲೇಖವು ಒಂದು ಸರಳ ರೇಷೆಯಿರುತ್ತದೆಂದು ನಾವು ಹಿಂದಿನ ಎರಡು ಉದಾ-

ಹರಣೆಗಳಲ್ಲಿ ನೋಡಿದ್ದೇವೆ. ಮತ್ತು ಅದು ಯಾವಾಗಲೂ ಹಾಗೇ ಇರುತ್ತದೆಂಬ ಸಂಗತಿಯನ್ನು ಸಿದ್ಧ ಮಾಡಲು ಸಹ ಬರುವದು. ನೀವು ಬೇಕಾದ ಏಕಘಾತ ದ್ವಿವರ್ಣ ಸಮೀಕರಣವನ್ನು ತೆಗೆದುಕೊಳ್ಳಿರಿ ಮತ್ತು ಅದರಲ್ಲಿಯ ವರ್ಣಗಳ ಅನುರೂಪ ಬೆಲೆಗಳ ಜೋಡಿಗಳನ್ನು ತೋರಿಸುವ ಬಿಂದುಗಳನ್ನು ಸ್ಥಾಪಿಸಿರಿ. ಆ ಎಲ್ಲ ಬಿಂದುಗಳು ಒಂದೇ ಸರಳ ರೇಷೆಯಲ್ಲಿರುವವೆಂಬುದು ನಿಮಗೆ ಕಂಡು ಬರುವದು. ಈಗ ಸರಳ ರೇಷೆಯ ಮೇಲಿನ ಯಾವುದೇ ಎರಡು ಬಿಂದುಗಳು ಗೊತ್ತಿದ್ದರೆ ಅದನ್ನು ನಿಶ್ಚಿತ ಮಾಡಲು ಬರುತ್ತದೆ. ಆದರೆ ಎಲ್ಲಿಯೂ ತಪ್ಪಾಗುವದಿಲ್ಲವೆಂಬುದನ್ನು ಮನಗಾಣಿಸಿಕೊಳ್ಳುವದಕ್ಕಾಗಿ ಇನ್ನೊಂದು ಮೂರನೇ ಬಿಂದುವನ್ನು ತೆಗೆದುಕೊಳ್ಳುವದು ಇಷ್ಟವಾದುದು. ಆ ರೀತಿಯಲ್ಲಿ ಆ ಬಿಂದುಗಳನ್ನು ಸ್ಥಾಪಿಸುವದಕ್ಕಾಗಿ **ವ** ದ ಯಾವ ಬೆಲೆ ಇದ್ದಾಗ ೧೭೦–೩೦ **ವ** ದ ಯಾವ ಬೆಲೆ ಇರುವದು ಅಂದರೆಯೇ **ವ** ಮತ್ತು **ಮ** ಇವುಗಳ ಯಾವ ಅನುರೂಪ ಬೆಲೆಗಳನ್ನು ತೆಗೆದುಕೊಂಡರೆ ಸಮೀಕರಣವು ಪೂರ್ಣವಾಗುತ್ತದೆಂಬುದನ್ನು ನೋಡುವಾ.

**ವ** = ೦, ೪, ೬ ಇದ್ದಾಗ

ಅನುಕ್ರಮವಾಗಿ **ಮ** = ೧೭೦—೩೦**ವ** = ೧೭೦, ೫೦, — ೧೦ ಇರುವದು.




ಆಲೇಖ ಕ್ರ. ೮.

ಆಲೇಖ ಪತ್ರದ ಮೇಲೆ (೦,೧೭೦), (೪,೫೦), ಮತ್ತು (೬,—೧೦) ಈ ಬಿಂದುಗಳನ್ನು ಸ್ಥಾಪಿಸಿ ಅವುಗಳೊಳಗಿಂದ ಹಾಯ್ದು ಹೋಗುವ ರೇಷೆಯನ್ನು ತೆಗೆಯುವಾ. (ಮೂರೂ ಬಿಂದುಗಳು ಒಂದೇ ಸರಳ ರೇಷೆಯಲ್ಲಿಲ್ಲದಿದ್ದರೆ ಕೃತಿಯಲ್ಲಿ ಎಲ್ಲಿಯಾದರೂ ತಪ್ಪಾಗಿದೆ ಎಂದು ತಿಳಿದು-ಕೊಳ್ಳತಕ್ಕದ್ದು.)

ಗಾಡಿಯು ಯಾವಾಗ ಮತ್ತು ಎಲ್ಲಿರುವದೆಂಬುದನ್ನು ತೋರಿಸುವ ಇದೇ ಆಲೇಖವು. ೧೭೦ ೩೦ವ ಈ ರಾಶಿಯ (ಇಲ್ಲವೆ ಫಲದ) ಆಲೇಖವು. ಮತ್ತು ಅದರಂತೆಯೇ ಮ=೧೭೦ ೩೦ ವ ಈ ಸಮೀಕರಣದ್ದೂ ಇದೇ ಆಲೇಖವು. ವ ಮತ್ತು ಮ ಇವುಗಳ ಅನುರೂಪ ಬೆಲೆಗಳ ಯಾವುದೇ ಜೋಡಿಗಳನ್ನು ತೆಗೆದುಕೊಂಡರೆ ಅವುಗಳನ್ನು ತೋರಿಸುವ ಬಿಂದುಗಳು ಇದೇ ಆಲೇಖದ ಮೇಲಿದ್ದುದು ಕಂಡುಬರುವದು.

೭·೭. ಇನ್ನೊಂದು ಎರಡನೇ ಉದಾಹರಣೆಯನ್ನು ತೆಗೆದುಕೊಳ್ಳುವಾ.

**ವಿಶ್ವಾಸರಾಯರು ಕೆಲಸಕ್ಕೆ ಸೇರಿ ಇಂದು ೩೦ ತಿಂಗಳುಗಳಾದವು. ಮೊದಲಿನಿಂದ ಅವರು ನಿಯಮಿತವಾಗಿ ಪ್ರತಿ ತಿಂಗಳಿಗೆ ೧೦೦ ರೂ. ಯಂತೆ ಶಿಲುಕು ಇಡುತ್ತಾರೆ. ಮೊದಲಿನ ಕೆಲವು ಶಿಲುಕನ್ನು ಸ್ವಲ್ಪ ಸಾಲವನ್ನು ತೀರಿಸುವದಕ್ಕಾಗಿ ವೆಚ್ಚ ಮಾಡಿದರು. ಮತ್ತು ಇಂದು ಅವರ ಬಳಿಯಲ್ಲಿ ೨೬೦೦ ರೂ.ಗಳಿರುತ್ತವೆ. ಇಂದಿನಿಂದ ಯಾವಾಗಾದರೂ ಅವರ ಬಳಿಯಲ್ಲಿ ಎಷ್ಟು ಹಣ ಕೂಡಿದ್ದಿರುವದೆಂಬುದನ್ನು ತೋರಿಸುವ ಸೂತ್ರವನ್ನು ರಚಿಸಿರಿ ಮತ್ತು ಆ ಸೂತ್ರದ ಆಲೇಖವನ್ನು ತೆಗೆಯಿರಿ.**

ಇಂದಿನಿಂದ ಮುಂದಿನ ಕಾಲವನ್ನು (ತಿಂಗಳುಗಳಲ್ಲಿ) **ಕ** ದಿಂದ ಮತ್ತು ಕೂಡಿಸಿಟ್ಟ ಹಣವನ್ನು (ರೂಪಾಯಿಗಳಲ್ಲಿ) **ಸ** ದಿಂದ ನಿರ್ದೇಶಿಸಿದರೆ, ಶಿಲಕು ಮತ್ತು ಕಾಲ ಇವುಗಳ ಸಂಬಂಧವನ್ನು, ಅವರ ಬಳಿಯಲ್ಲಿ ಇಂದು ೨೬೦೦ರೂ. ಇದ್ದುದರಿಂದ ಮತ್ತು ಪ್ರತಿ ತಿಂಗಳ ಅವರು ೧೦೦ ರೂ. ಶಿಲುಕು ಇಡುವದ-ರಿಂದ, **ಸ**=೨೬೦೦+೧೦೦ **ಕ** ಈ ಸೂತ್ರದಿಂದ ವ್ಯಕ್ತಪಡಿಸಲು ಬರುವದು. ಈಗ **ಸ**=೨೬೦೦+೧೦೦ **ಕ** ಈ ರಾಶಿಯ (ಇಲ್ಲವೆ ಫಲದ) ಆಲೇಖವನ್ನು ತೆಗೆಯುವದಾದರೆ ಅದರ ಮೇಲಿರುವ ಯಾವುದೇ ಮೂರು ಬಿಂದುಗಳ

ಸಹನಿರ್ದೇಶಕಗಳನ್ನು ಹುಡುಕುವಾ. **ಕ** = ೦, —೨೬, ೧೦ ಇದ್ದಾಗ **ಸ** = ೨೬೦೦ + ೧೦೦ **ಕ** = ೨೬೦೦, ೦, ೩೬೦೦ ಇರುವದು.

ಈಗ ನಾವು ಆಲೇಖಪತ್ರದ ಮೇಲೆ (೦, ೨೬೦೦) ಮತ್ತು (—೨೬, ೦) ಈ ಬಿಂದುಗಳನ್ನು ಸ್ಥಾಪಿಸುವಾ, ಮತ್ತು ಅವುಗಳೊಳಗಿಂದ ಹಾಯ್ದು ಹೋಗುವ ರೇಷೆಯನ್ನು ತೆಗೆಯುವಾ. ತೆಗೆದಂಥ ಆಲೇಖದ ಮೇಲೆ (೧೦, ೩೬೦೦) ಈ ಬಿಂದುವು ಸಹ ಇರುವದರಿಂದ ಆಲೇಖವನ್ನು ತೆಗೆಯುವದರಲ್ಲಿ ಯಾವದೇ ತಪ್ಪು ಆಗಿಲ್ಲ.




ಆಲೇಖ ಕ್ರ. ೯.

೨೬೦೦ + ೧೦೦**ಕ** ಈ ರಾಶಿಯು ಇಲ್ಲವೆ **ಸ** = ೨೬೦೦ + ೧೦೦ಕ ಈ ಸಮೀಕರಣದ್ದು ಇದೇ ಆ ಆಲೇಖವು.

೭·೮. **ಉ. ೩.** ೪ಕ್ಷ — ೧೨ ಈ ರಾಶಿಯ ಆಲೇಖವನ್ನು ತೆಗೆಯಿರಿ.

ಕ್ಷ = ೦, ೩, ೫ ಇದ್ದಾಗ

೪ಕ್ಷ — ೧೨ = —೧೨, ೦, ೮ ಇರುವದು.

(೦, —೧೨) ಮತ್ತು (೩, ೦) ಈ ಬಿಂದುಗಳನ್ನು ಸ್ಥಾಪಿಸುವಾ ಮತ್ತು ಅವುಗಳೊಳಗಿಂದ ಹಾಯ್ದು ಹೋಗುವ ರೇಷೆಯನ್ನು ತೆಗೆಯುವಾ. ೫, ೮) ಈ ಬಿಂದುವಾದರೂ ಅದರ ಮೇಲಿರುವದು.

## ಪ್ರಶ್ನಸಂಗ್ರಹ ೩೭.

೧. ಮುಂದಿನ ರಾಶಿಗಳ ಆಲೇಖಗಳನ್ನು ತೆಗೆಯಿರಿ :

(೧) ೨ಕ್ಷ+೩; (೨) ೪ಕ್ಷ—೧; (೩) ೫ಪ+೮;
(೪) ೯ಮ—೭; (೫) ೧೨—೬ಸ; (೬) ೮—೪ರ.

೨. ಮುಂದಿನ ಸಮೀಕರಣಗಳನ್ನು ಆಲೇಖಿಸಿರಿ :

(೧) ಯ = ಕ್ಷ—೬; (೨) ಯ = ೩ಕ್ಷ+೧; (೩) ಯ = $\frac{೧}{೨}$ಕ್ಷ—೫;
(೪) ಯ = $\frac{೧}{೩}$ಕ್ಷ+$\frac{೨}{೩}$; (೫) ೨ಯ = ೮—೩ಕ್ಷ; (೬) ೪ಕ್ಷ+ಯ = ೫;
(೭) ಕ್ಷ+$\frac{೨}{೫}$ಯ = ೩; (೮) $\frac{ಕ್ಷ}{೪}$ — ಯ = ೧; (೯) $\frac{ಕ್ಷ}{೨}$ + $\frac{ಯ}{೩}$ = ೫;
(೧೦) ಕ್ಷ = ೪—೨ಯ; (೧೧) ೫ಪ—೩ಮ = ೨;
(೧೨) ೪ರ—೭ಸ+೩ = ೦.

೩. ಮುಂದಿನ ಸಮೀಕರಣಗಳನ್ನು ಆಲೇಖಿಸಿರಿ :

(೧) ಯ = ೫ಕ್ಷ; (೨) ಯ = $\frac{೧}{೨}$ಕ್ಷ; (೩) ೨ಯ+೩ಕ್ಷ = ೦;
(೪) ಪ = ೭ಮ; (೫) ರ—$\frac{೩}{೪}$ಸ = ೦;

ಈ ಐದೂ ಆಲೇಖಗಳ ವಿಶಿಷ್ಟಗುಣವೇನು ?

೪. ಮುಂದಿನ ಸಮೀಕರಣಗಳನ್ನು ಆಲೇಖಿಸಿರಿ. ಪ್ರತಿಯೊಂದು ಸಮೂಹದೊಳಗಿನ ನಾಲ್ಕು ಸಮೀಕರಣಗಳನ್ನು ಒಂದೇ ಆಲೇಖಪತ್ರದ ಮೇಲೆ ತೆಗೆಯುವದಿದೆ.

(೧) ಯ = ೨ಕ್ಷ+೫; ಯ = ೨ಕ್ಷ—೩; ಯ = ೨ಕ್ಷ—೧; ಯ—೨ಕ್ಷ = ೪.
(೨) ಪ = ೪ಮ—೩; ಪ = ೪ಮ+೧; ಪ = ೪ಮ+೪;
ಪ—೪ಮ+೭ = ೦.
(೩) ೩ರ+೪ಸ = ೯; ರ+$\frac{೪}{೩}$ಸ = ೧; $\frac{೩}{೪}$ರ+ಸ+೮ = ೦;
$\frac{ರ}{೪}$ + $\frac{ಸ}{೩}$ = ೪.

ಪ್ರತಿಯೊಂದು ಸಮೂಹದೊಳಗಿನ ನಾಲ್ಕು ಆಲೇಖಗಳ ವಿಷಯದಲ್ಲಿ ಏನು ಕಂಡುಬರುತ್ತದೆ ?

**ಆರಂಭಸ್ಥಾನದೊಳಗಿಂದ** (೦,೦) ಹಾಯ್ದು ಹೋಗುವ ಸರಳ ರೇಷೆ-ಗಳಿರುತ್ತವೆಂಬುದು ಕಂಡು ಬಂದಿರಬಹುದು. ಯಾವುದರಲ್ಲಿ **ಸ್ಥಿರಪದ** (Constant term) ಇಲ್ಲ, ಇಂಥ ಅಂದರೆ **ಯು** = **ಮಕ್ಷ**, **ಅಯು** + **ಕಕ್ಷ** = ೦ ಇಂಥಸ್ವರೂಪದ ಏಕಘಾತ ದ್ವಿವರ್ಣ ಸಮೀಕರಣಗಳ ಆಲೇಖ-ಗಳೆಂದರೆ ಆರಂಭಸ್ಥಾನದೊಳಗಿಂದ ಹಾಯ್ದು ಹೋಗುವ ಸರಳ ರೇಷೆಗಳೇ ಇದ್ದಿರಬೇಕು. ಈ ಸಮೀಕರಣಗಳಲ್ಲಿ **ಕ್ಷ** = ೦ ಇದ್ದರೆ **ಯು** = ೦ ಇದ್ದಿರ-ಬೇಕು. ಆದುದರಿಂದ ಈ ರೇಷೆಗಳು (೦,೦) ಈ ಬಿಂದುವಿನೊಳಗಿಂದ ಹಾಯ್ದು ಹೋಗಬೇಕು.

**೭·೧೦.** **ಕ್ಷ**-ಅಕ್ಷದ ಮೇಲಿರುವ ಪ್ರತಿಯೊಂದು ಬಿಂದುವಿನ **ಕೋಟ್ಯಂ-ತರವೆಂದರೆ** **ಕ್ಷ**-ಅಕ್ಷದಿಂದ **ಶೂನ್ಯ** ಅಂತರವು, ಆದುದರಿಂದ **ಯು** = ೦ ಇದು **ಕ್ಷ**-ಅಕ್ಷದ ಸಮೀಕರಣವಿರುವದು. ಅದರಂತೆಯೇ **ಯು**-ಅಕ್ಷದ ಮೇಲಿನ ಪ್ರತಿ-ಯೊಂದು ಬಿಂದುವಿನ **ಭುಜಾಂತರವೆಂದರೆ** **ಯು**-ಅಕ್ಷದಿಂದ ಇರುವ ಅಂತರವು ಶೂನ್ಯ, ಆದುದರಿಂದ **ಕ್ಷ**=೦ ಇದು **ಯು**-ಅಕ್ಷದ ಸಮೀಕರಣವಿರುವದು.

**೭·೧೧.** **ಕ್ಷ**-ಅಕ್ಷದಿಂದ ೫ ಮಾನಗಳ (Units) ಅಂತರದ ಮೇಲಿರುವ ಸಮಾಂತರ ರೇಷೆಯ ಮೇಲಿರುವ ಯಾವುದಾದರೊಂದು ಬಿಂದುವಿನ ಕೋಟಿಯು ೫, ಮತ್ತು —೫ ಮಾನಗಳ ಅಂತರದ ಮೇಲಿರುವ ಸಮಾಂತರ ರೇಷೆಯ ಮೇಲಿನ ಯಾವದಾದರೊಂದು ಬಿಂದುವಿನ ಕೋಟಿಯು —೫, ಆದುದರಿಂದ **ಯು** = ೫ ಮತ್ತು **ಯು** = —೫ ಇವು ಅವುಗಳ ಸಮೀಕರಣ-ಗಳಿರುವವು. ಅದರಂತೆಯೇ **ಅ** ಮಾನಗಳ ಅಂತರದ ಮೇಲಿರುವ ಯಾವು-ದಾದರೊಂದು ಬಿಂದುವಿನ **ಕೋಟಿಯು** **ಅ** ಇರುವದರಿಂದ **ಯು** = **ಅ** ಇದು ಅದರ ಸಮೀಕರಣವಿರುವದು. **ಯು** = ೩, **ಯು** + ೩ = ೦ **ಯು** = ೬, **ಯು** + ೬ = ೦ ಇವು **ಭುಜಾಕ್ಷಕ್ಕೆ** (**ಕ್ಷ**—ಅಕ್ಷಕ್ಕೆ) ಸಮಾಂ-ತರವಿರುವ ರೇಷೆಗಳ ಸಮೀಕರಣಗಳಿರುತ್ತವೆ.

**೭·೧೨.** **ಯು**-ಅಕ್ಷದಿಂದ ೪ ಮಾನಗಳ ಅಂತರದ ಮೇಲಿರುವ ಸಮಾಂತರ ರೇಷೆಯ ಮೇಲಿನ ಯಾವದಾದರೊಂದು ಬಿಂದುವಿನ **ಭುಜವು** ೪, ಮತ್ತು —೪ ಮಾನಗಳ ಅಂತರದ ಮೇಲಿರುವ ಸಮಾಂತರ ರೇಷೆಯ ಮೇಲಿನ ಯಾವುದಾ-ದರೊಂದು ಬಿಂದುವಿನ **ಭುಜ**—೪, ಆದುದರಿಂದ **ಕ್ಷ**=೪, **ಕ್ಷ**=— ೪ ಇವು ಅವುಗಳ

ಸಮೀಕರಣಗಳಿರುವವು. ಅದರಂತೆಯೇ ಆ ಮಾನಗಳ ಅಂತರದ ಮೇಲಿರುವ ಸಮಾಂತರ ರೇಷೆಯ ಮೇಲಿನ ಯಾವದಾದರೊಂದು ಬಿಂದುವಿನ **ಭುಜ** ಅ, ಆದುದರಿಂದ **ಕ್ಷ** = ಅ ಇದು ಅದರ ಸಮೀಕರಣವಿರುವದು. **ಕ್ಷ** = ೨, **ಕ್ಷ** + ೨ = ೦, **ಕ್ಷ** = ೯, **ಕ್ಷ** + ೯ = ೦ .... .... .... ಇವು **ಕೋಟ್ಯಕ್ಷಕ್ಕೆ** (**ಯ** ಅಕ್ಷಕ್ಕೆ) ಸಮಾಂತರವಿರುವ ರೇಷೆಗಳ ಸಮೀಕರಣ-ಗಳಿರುತ್ತವೆ.

**೭.೧೩.** ಹಿಂದಿನ ಪ್ರಶ್ನಸಂಗ್ರಹದೊಳಗಿನ ೪ನೆಯ ಉದಾಹರಣೆ-ಯಲ್ಲಿ ಪ್ರತಿಯೊಂದು ಪ್ರೋಟ—ಉದಾಹರಣೆಯಲ್ಲಿ ಕೊಟ್ಟ ನಾಲ್ಕು ಸಮೀಕರಣಗಳ ಆಲೇಖಗಳನ್ನು ತೆಗೆದರೆ ಅವು ಒಂದಕ್ಕೊಂದು ಸಮಾಂತರ-ವಿರುವ ಸರಳ ರೇಷೆಗಳಿರುವದು ಕಂಡುಬಂದಿರಬಹುದು. ಯಾವ ಸಮೀಕರಣ-ಗಳನ್ನು **ಯ** = **ಮಕ್ಷ** + ಕ ಈ ಸ್ವರೂಪದಲ್ಲಿ ಬರೆದರೆ ಅವುಗಳಲ್ಲಿ **ಕ್ಷ**-ಪದದ ಸಹಗುಣಕವು ಒಂದೇ ಇರುವದೋ, ಇಲ್ಲವೆ **ಅಕ್ಷ** + **ಕಯ** + **ಗ** = ೦ ಈ ಸ್ವರೂಪದಲ್ಲಿದ್ದರೆ **ಕ್ಷ**—ಪದ ಮತ್ತು **ಯ** ಪದ ಇವುಗಳ ಸಹಗುಣಕಗಳ ಗುಣೋತ್ತರವು ಒಂದೇ ಇರುತ್ತವೆಯೋ ಆ ಸಮೀಕರಣಗಳ ಆಲೇಖಗಳು ಸಮಾಂತರ ರೇಷೆಗಳಿರುತ್ತವೆ. ಯ = ಮಕ್ಷ + ಅ, ಯ = ಮಕ್ಷ + ಕ, ಯ = ಮಕ್ಷ + ಗ.... ಈ ಸಮೀಕರಣಗಳ ಆಲೇಖಗಳು ಸಮಾಂತರ ರೇಷೆಗಳಿರುತ್ತವೆ.

**೭.೧೪.** ಹಿಂದಿನ ಪ್ರಶ್ನಸಂಗ್ರಹದೊಳಗಿನ ೬ನೇ ಉದಾಹರಣೆಯಲ್ಲಿ ಪ್ರತಿಯೊಂದು ಪ್ರೋಟ—ಉದಾಹರಣೆಯಲ್ಲಿ ಕೊಟ್ಟ ಎರಡು ಸಮೀಕರಣಗಳ ಆಲೇಖಗಳನ್ನು ತೆಗೆದರೆ ಅವು ಒಂದಕ್ಕೊಂದು ಕಾಟಕೋನದಲ್ಲಿ ಛೇದಿಸುವ ಸರಳ ರೇಷೆಗಳಿದ್ದುದು ಕಂಡುಬಂದಿರಬೇಕು. ಯಾವ ಎರಡು ಸಮೀಕರಣ-ಗಳನ್ನು **ಯ** = **ಮಕ್ಷ** + **ಕ** ಈ ಸ್ವರೂಪದಲ್ಲಿ ಬರೆದರೆ ಅವುಗಳ **ಕ್ಷ**—ಪದಗಳ ಸಹಗುಣಕಗಳ ಗುಣಾಕಾರವು −೧ ಬರುವದೋ, ಆ ಸಮೀಕರಣಗಳ ಆಲೇಖ-ಗಳು ಒಂದಕ್ಕೊಂದು ಕಾಟಕೋನವನ್ನು ಮಾಡುತ್ತವೆ. ಯ = ಮಕ್ಷ + ಅ ಮತ್ತು ಯ = − $\frac{೧}{ಮ}$ ಕ್ಷ + ಕ ಈ ಸಮೀಕರಣಗಳ ಆಲೇಖಗಳು ಒಂದಕ್ಕೊಂದು ಕಾಟಕೋನದಲ್ಲಿ ಛೇದಿಸುತ್ತವೆ.

## ೫.

೭·೧೫· ಯಾವದಾದರೊಂದು ಏಕಘಾತ ದ್ವಿವರ್ಣ ಸಮೀಕರಣವನ್ನು ಕೊಟ್ಟಿದ್ದರೆ ಹೇಗೆ ನಾವು ಅದರ ಆಲೇಖವನ್ನು ತೆಗೆಯುತ್ತೇವೋ ಹಾಗೆಯೇ ಅದರ ವಿರುದ್ಧವಾಗಿ ಆಲೇಖಕದಲ್ಲಿ ತೆಗೆದು ಬಂದ ಸರಳ ರೇಷೆಯನ್ನು ಕೊಟ್ಟಿದ್ದರೆ ಅದರ ಸಮೀಕರಣವನ್ನಾದರೂ ನಮಗೆ ಮಂಡಿಸಲು ಬರಬೇಕು. ಈಗ ಅವ್ಯಕ್ತ ಬೆಲೆಗಳ ಯಾವ ಜೋಡಿಗಳನ್ನು ತೆಗೆದುಕೊಂಡರೆ ಸಮೀಕರಣದ ಪೂರ್ತತೆಯಾಗುತ್ತದೆಂಬುದನ್ನು ನೋಡಿ ಅಂಥವು ಎರಡು ಜೋಡಿಗಳನ್ನು ತೆಗೆದುಕೊಂಡು ಪ್ರತಿಯೊಂದು ಜೋಡಿಯಲ್ಲಿಯ ಬೆಲೆಗಳು ಯಾವ್ಯಾವರ ಸಹನಿರ್ದೇಶಕಗಳು ಇರುವವೋ ಅಂಥ ಎರಡು ಬಿಂದುಗಳನ್ನು ನಾವು ಹೇಗೆ ಸ್ಥಾಪಿಸುತ್ತೇವೋ, ಅವುಗಳೊಳಗಿಂದ ಹಾಯ್ದು ಹೋಗುವ ಸರಳ ರೇಷೆಯನ್ನು ಹೇಗೆ ತೆಗೆಯುತ್ತೇವೋ ಮತ್ತು ಆ ಸರಳ ರೇಷೆಯು ಹೇಗೆ ಕೊಟ್ಟ ಸಮೀಕರಣದ ಆಲೇಖವಿರುತ್ತದೆಯೋ, ಹಾಗೆಯೇ ಆಲೇಖಿತ ಸರಳ ರೇಷೆಯ ಸಮೀಕರಣವನ್ನು ಬರೆಯುವದಿದ್ದಾಗ ಆ ರೇಷೆಯ ಮೇಲಿರುವ ಯಾವುವೇ ಎರಡು ಬಿಂದುಗಳನ್ನು ತೆಗೆದುಕೊಳ್ಳುವದು, ಅವುಗಳ ಸಹನಿರ್ದೇಶಕಗಳನ್ನು ನೋಡುವದು ಮತ್ತು ಈ ಸಹನಿರ್ದೇಶಕ ಅವ್ಯಕ್ತಗಳ ಬೆಲೆಗಳನ್ನು ತೆಗೆದುಕೊಂಡರೆ ಯಾವ ಸಮೀಕರಣದ ಪೂರ್ತತೆಯಾಗುತ್ತದೆಯೋ ಅದೇ ಬೇಕಾಗಿರುವ ಸಮೀಕರಣವಿದ್ದಿರಬೇಕು. ಮುಂದಿನ ಸರಳ ರೇಷೆಗಳ ಸಮೀಕರಣಗಳನ್ನು (ಆಲೇಖ ಕ್ರ. ೧೨) ನಮಗೆ ಮಂಡಿಸುವದಿದೆ ಎಂದು ತಿಳಿಯಿರಿ.




ಆಲೇಖ ಕ್ರ. ೧೨.

ನಾವು ನೋಡುವದೇನೆಂದರೆ ಒಂದು ಸರಳರೇಷೆಯು (೩,೪), ಮತ್ತು (−೩,೮) ಈ ಬಿಂದುಗಳೊಳಗಿಂದ

∴ −೪ = ೦ × ಮ + ಗ ಅಂ. ಗ = −೪,

೦ = −೨ಮ + ಗ ಅಂ. ಮ = $\frac{೧}{೨}$ಗ = −೨.

∴ ಯ = −೨ಕ್ಷ − ೪ ಇದು ಬೇಕಾಗಿದ್ದ ಸಮೀಕರಣವು. ಇಷ್ಟವಿದ್ದರೆ ಈ ಸಮೀಕರಣವನ್ನು ೨ಕ್ಷ + ಯ + ೪ = ೦ ಎಂದು ಸಹ ಬರೆಯಬಹುದು.

೭·೧೬. ಮೇಲಿನ (ಕ್ರ. ೧೨) ಎರಡೂ ಆಲೇಖಗಳ ಕಡೆಗೆ ನೋಡಿದರೆ ಅವು ಒಂದನ್ನೊಂದು (−೮, ೧೨) ಈ ಬಿಂದುವಿನಲ್ಲಿ ಛೇದಿಸುತ್ತವೆಂದು ಕಂಡುಬರುತ್ತದೆ. ಆದರೆ (−೮, ೧೨) ಈ ಬಿಂದುವು ಎರಡೂ ಆಲೇಖಗಳಿಗೆ ಸಾಧಾರಣವಿದೆ. ಸಹಜವಾಗಿಯೇ ಕ್ಷ = −೮ ಮತ್ತು ಯ = ೧೨ ಎಂದು ಇಟ್ಟರೆ ೪ಕ್ಷ + ೫ಯ = ೨೮, ಮತ್ತು ೨ಕ್ಷ + ಯ + ೪ = ೦ ಈ ಎರಡೂ ಸಮೀಕರಣಗಳ ಪೂರ್ತತೆಯಾಗಬೇಕು, ಮತ್ತು ಅದು ಹಾಗೆ ಆಗೇ ಆಗುತ್ತದೆ. ಆದುದರಿಂದ ಎರಡು ಏಕಘಾತ ದ್ವಿವರ್ಣ ಸಮಕಾಲಿಕ ಸಮೀಕರಣಗಳನ್ನು ಕೊಟ್ಟು ಅವ್ಯಕ್ತಗಳ ಮಾನವನ್ನು ತೆಗೆಯಲು ಹೇಳಿದ್ದರೆ ಅವುಗಳ ಆಲೇಖಗಳನ್ನು ತೆಗೆದು ಹೇಳಬಹುದು. ಆಲೇಖಗಳ ಛೇದನಬಿಂದುವಿನ ಸಹನಿರ್ದೇಶಕಗಳೇ ಅವ್ಯಕ್ತಗಳ ಮಾನಗಳಿರುವವು. ಈ ಸಂಗತಿಯ ವಿವೇಚನೆಯನ್ನು ಮುಂದಿನ ಅನುವಾಕದಲ್ಲಿ ವಿಸ್ತಾರವಾಗಿ ಮಾಡಿದೆ.

## ಪ್ರಶ್ನಸಂಗ್ರಹ ೩೮.

ಕೆಳಗಿನ ಬಿಂದುಗಳನ್ನು ಸ್ಥಾಪಿಸಿರಿ ಮತ್ತು ಅವುಗಳೊಳಗಿಂದ ಹೋಗುವ ಆಲೇಖಗಳ ಸಮೀಕರಣಗಳನ್ನು ಹೇಳಿರಿ.

(೧) (೪,೮) (೨,೨), (−೧, −೭).

(೨) (೧,೧೫), (−೧, −೧), (−೨, −೯).

(೩) (−೪,೦), (೦,೮), (೨,೧೨). (೪) (−೪, −೭), (೦, −೪), (೪, −೧).

(೫) (−೩,೬), (೦,೫), (೩,೪). (೬) (−೩, −೧), (೧,೩), (೫,೭).

(೭) (−೩, −೭), (೦, −೫), (೩, −೩), (೬, −೧)

(೮) (−೪, −೪), (೧,೦), (೬,೪), (೧೧,೮).

(೯) (೫,೨), (೧,೧), (−೩,೦) (−೭, −೧).

(೧೦) (−೭,೫), (೧,೧), (೩,೦), (೫, −೧), (೭, −೨).

ಈ ಸಂಬಂಧವನ್ನು ತೋರಿಸುವಂಥ ಬಿಂದುಗಳನ್ನು ಸ್ಥಾಪಿಸಿ ಅವುಗಳೊಳಗಿಂದ ಹೋಗುವ ರೇಷೆಯನ್ನು ತೆಗೆದರೆ ಅದು ಈ ಎರಡನೆಯ ಗಾಡಿಯ ಮಾರ್ಗ-ಕ್ರಮಣದ ಆಲೇಖವಾಗುವದು.




ಆಲೇಖ ಕ್ರ. ೧೩.

ಈಗ ಈ ಎರಡೂ ಗಾಡಿಗಳು ಯಾವಾಗ ಮತ್ತು ಎಲ್ಲಿ ಒಂದಕ್ಕೊಂದು ಭೆಟ್ಟಿಯಾಗುವವೋ ಆ ವೇಳೆಯನ್ನು ಮತ್ತು ಸ್ಥಳವನ್ನು ತೋರಿಸುವ ಬಿಂದುವು ಎರಡೂ ಆಲೇಖಗಳ ಮೇಲೆ ಇರಬೇಕು. ಮತ್ತು ಈ ಬಿಂದುವು ಅಂದರೆ ಯಾವ ಸ್ಥಳದಲ್ಲಿ ಆ ರೇಷೆಗಳು ಒಂದನ್ನೊಂದು ಛೇದಿಸುತ್ತವೆಯೋ ಅಂತಹದು. ಆಲೇಖಗಳ ಕಡೆಗೆ ನೋಡಿದರೆ (೧,೧೪೦) ಇದು ಆ ಬಿಂದು-ವಿದ್ದುದು ಕಂಡುಬರುವದು. ಇದರ ಅರ್ಥವೇನಂದರೆ ಮಧ್ಯಾನ್ಹದ ನಂತರ ೧ ತಾಸಿನ ಮೇಲೆ ಆ ಗಾಡಿಗಳು ನಮ್ಮೂರಿನಿಂದ ಪೂರ್ವದ ದಿಕ್ಕಿನಲ್ಲಿ ೧೪೦ ಮೈಲುಗಳ ಅಂತರದ ಮೇಲೆ ಭೆಟ್ಟಿಯಾಗುವವು, ಮತ್ತು ಇದು ಸರಿಯೇ ಇರುವದು. ೧೨ ಗಂಟೆಗೆ ನಮ್ಮೂರಿನಿಂದ ೧೦೦ ಮೈಲು ಅಂತರದ ಮೇಲಿರುವ ಮತ್ತು ಮುಂದೆ ತಾಸಿಗೆ ೪೦ ಮೈಲು ವೇಗದಿಂದ ಹೋಗುವ ಗಾಡಿಯು ೧ ಗಂಟೆಗೆ ನಮ್ಮೂರಿನಿಂದ (೧೦೦ + ೪೦) ಅ. ೧೪೦ ಮೈಲುಗಳ ಅಂತರದ ಮೇಲಿರುವದು, ಮತ್ತು ೧೨ ಗಂಟೆಗೆ ನಮ್ಮೂರಿನಿಂದ ೧೬೦ ಮೈಲು ಅಂತರದ

ಹೇಳಲು ಬರುವದು. ಆಲೇಖಗಳ ಛೇದನಬಿಂದುವಿನ **ಸಹನಿರ್ದೇಶಕಗಳೇ** ಅವ್ಯಕ್ತಗಳ ಮಾನಗಳು.

**ಉ. ೧೮.** ಇದೇ ಪ್ರಕರಣದಲ್ಲಿಯ ಹಿಂದಿನ ಇನ್ನೊಂದು ಉದಾಹರಣೆಯನ್ನು ತೆಗೆದುಕೊಳ್ಳುವಾ. **ಪ.** ೩ನೆಯದರೊಳಗಿನ ವಸಂತರಾಯರ ಸಂಚಿತಧನದ ಮತ್ತು ಅವರಂತೆಯೇ **ಪ.** ೭ನೆಯದರೊಳಗಿನ ವಿಶ್ವಾಸರಾಯರು ಕೂಡಿಸಿಟ್ಟ ಹಣದ, ಈ ಎರಡೂ ಆಲೇಖಗಳನ್ನು ಅಕ್ಷಗಳ ಒಂದೇ ಜೋಡಿಗೆ ಅನುಸರಿಸಿ ತೆಗೆಯುವಾ.




ಆಲೇಖ ಕ್ರ. ೧೪.

ವಸಂತರಾಯರ ಶಿಲಕು

| ಇಂದು | ೪ ತಿಂಗಳಾದ ನಂತರ. | ೧೦ ತಿಂಗಳಾದ ನಂತರ |
|---|---|---|
| ೨೦೦೦ ರೂ. | ೨೮೦೦ ರೂ. | ೪೦೦೦ ರೂ. |

ಆದುದರಿಂದ (೦, ೨೦೦೦), (೪, ೨೮೦೦), (೧೦, ೪೦೦೦) ಈ ಬಿಂದುಗಳೊಳಗಿಂದ ಹೋಗುವ ರೇಷೆಯನ್ನು ತೆಗೆದರೆ ಅದು ವಸಂತರಾಯರ ಸಂಚಿತ ಧನದ ಆಲೇಖವಾಗುವದು. ಅದರಂತೆಯೇ ವಿಶ್ವಾಸರಾಯರ ಶಿಲಕು

| ಇಂದು | ೪ ತಿಂಗಳಾದ ಮೇಲೆ | ೮ ತಿಂಗಳಾದ ಮೇಲೆ |
|---|---|---|
| ೨೬೦೦ ರೂ. | ೩,೦೦೦ ರೂ. | ೩,೪೦೦ ರೂ. |

ಆದುದರಿಂದ (೦,೨೬೦೦), (೪,೩೦೦೦), (೮,೩೪೦೦)

ಈ ಬಿಂದುಗಳೊಳಗಿಂದ ಹೋಗುವ ಸರಳ ರೇಷೆಯನ್ನು ತೆಗೆದರೆ ಅದು ವಿಶ್ವಾಸರಾಯರು ಕೂಡಿಸಿಟ್ಟ ಹಣದ ಆಲೇಖವಾಗುವದು.

ಇಲ್ಲಿ ಎರಡೂ ಆಲೇಖಗಳು ಒಂದನ್ನೊಂದು (೬,೩೨೦೦) ಈ ಬಿಂದುವಿನಲ್ಲಿ ಛೇದಿಸಿದ್ದು ಕಂಡುಬರುವದು. ಇದರ ಅರ್ಥವೇನೆಂದರೆ ೬ ತಿಂಗಳುಗಳ ನಂತರ ಇಬ್ಬರಲ್ಲಿಯೂ ಅಷ್ಟೇ ಹಣವು ಕೂಡಿದ್ದಿರುವದು, ಮತ್ತು ಇದು ನಿಜವೇ. ೬ ತಿಂಗಳುಗಳ ನಂತರ ವಸಂತರಾಯರ ಬಳಿಯಲ್ಲಿ (೨೦೦೦+೬×೨೦೦) ರೂ. ಅಂ. (೨೦೦೦+೧೨೦೦) ರೂ., ಅಂ. ೩೨೦೦ ರೂ. ಇರುವವು. ಮತ್ತು ವಿಶ್ವಾಸರಾಯರ ಬಳಿಯಲ್ಲಿಯೂ (೨೬೦೦+೬×೧೦೦)ರೂ. ಅಂ. (೨೬೦೦+೬೦೦) ರೂ. ಅಂ. ೩,೨೦೦ ರೂ.ಗಳೇ ಇರುವವು.

ಈಗ ನಾವು ಹಿಂದೆ ನೋಡಿದ್ದೇನೆಂದರೆ ವಸಂತರಾಯರ ವಿಷಯದಲ್ಲಿ ಸಂಚಿತ ಧನವು (**ಸ**) ಮತ್ತು ಕಾಲ (**ಕ**) ಇವುಗಳೊಳಗಿನ ಸಂಬಂಧವನ್ನು **ಸ** = ೨೦೦೦+೨೦೦**ಕ** ಈ ಸೂತ್ರವೂ, ಮತ್ತು ವಿಶ್ವಾಸರಾಯರ ವಿಷಯದಲ್ಲಿ ಅದನ್ನು **ಸ** = ೨೬೦೦+೧೦೦**ಕ** ಈ ಸೂತ್ರವು ತೋರಿಸುತ್ತವೆ. ಆದರೆ **ಸ** = ೨೦೦೦+೨೦೦**ಕ** ಇದು ಮೊದಲನೇ ಆಲೇಖದ ಸಮೀಕರಣವಿದ್ದು, **ಸ** = ೨೬೦೦+೧೦೦**ಕ** ಇದು ಎರಡನೆಯದರದಿರುತ್ತದೆಂಬುದು ಸ್ಪಷ್ಟವಿದೆ. ಮೊದಲನೇ ಆಲೇಖದ ಮೇಲೆ (೦,೨೦೦೦), (೪,೨೮೦೦), (೧೦,೪೦೦೦) ಈ ಬಿಂದುಗಳಿರುತ್ತವೆ. ಮತ್ತು **ಕ** = ೦, ೪, ೧೦, **ಸ** = ೨೦೦೦, ೨೮೦೦, ೪೦೦೦ ಈ ಕೂಡಿರುವ ಬೆಲೆಗಳಿಂದ **ಸ** = ೨೦೦೦ + ೨೦೦**ಕ** ಈ ಸಮೀಕರಣದ ಪೂರ್ತತೆಯಾಗುತ್ತದೆ. ಎರಡನೇ ಆಲೇಖದ ಮೇಲೆ (೦, ೨೬೦೦), (೪,೩೦೦೦), (೮,೩೪೦೦) ಈ ಬಿಂದುಗಳಿದ್ದು

ಕ = ೦, ೪, ೮; ಸ = ೨೬೦೦, ೩೦೦೦, ೩೪೦೦, ಈ ಕೂಡಿರುವ ಬೆಲೆಗಳಿಂದ ಸ = ೨೬೦೦+೧೦೦ಕ ಈ ಸಮೀಕರಣದ ಪೂರ್ತತೆಯಾಗುತ್ತದೆ.

ಈಗ ಎರಡೂ ಆಲೇಖಗಳು ಒಂದನ್ನೊಂದು (೬,೩೨೦೦) ಈ ಬಿಂದುವಿನಲ್ಲಿ ಛೇದಿಸುತ್ತವೆ. ಸಹಜವಾಗಿಯೇ ಕ = ೬; ಸ = ೩೨೦೦ ಈ ಬೆಲೆಗಳಿಂದ ಎರಡೂ ಸಮೀಕರಣಗಳ ಪೂರ್ತತೆಯಾಗಬೇಕು, ಮತ್ತು ಅದು ಹಾಗೆ ಆಗೇ ಆಗುತ್ತದೆ. ಏಕೆಂದರೆ ಸ = ೨೦೦೦+೨೦೦ಕ ಈ ಸಮೀಕರಣದಲ್ಲಿ ಕ = ೬ ಇದ್ದಾಗ ಸ = ೨೦೦೦+೨೦೦ ಕ = ೩೨೦೦ ಇರುವದು. ಮತ್ತು ಸ = ೨೬೦೦+೧೦೦ಕ ಇದರಲ್ಲಿ ಕ = ೬ ಇದ್ದಾಗ ಸ = ೨೬೦೦ + ೧೦೦ × ೬ = ೨೬೦೦+೬೦೦ = ೩೨೦೦ ಇರುವದು.

೭·೧೯. ಏಕಘಾತ ದ್ವಿವರ್ಣ ಸಮೀಕರಣಗಳ ಜೋಡಿಯನ್ನು ಕೊಟ್ಟಿದ್ದರೆ ಅವನ್ನು ಬಿಡಿಸುವ **ನಾಲ್ಕು ರೀತಿಗಳು, ಯೋಗ ವಿಯೋಗ ರೀತಿ ಉತ್ಥಾಪನ** ಇಲ್ಲವೆ **ಆದೇಶರೀತಿ; ತುಲನರೀತಿ** ಮತ್ತು **ವಜ್ರಾಭ್ಯಾಸರೀತಿ** ಇಲ್ಲವೆ **ಕತ್ತರಿಯ ನಿಯಮ**, ನಮಗೆ ಇಲ್ಲಿಯವರೆಗೆ ಗೊತ್ತಿದ್ದವು. ಇಂದು ಸಮೀಕರಣಗಳನ್ನು ಆಲೇಖ ಮುಖಾಂತರವಾಗಿ ಬಿಡಿಸುವದಿದು **ಐದನೇ ರೀತಿಯು—ಆಲೇಖರೀತಿಯು**—ನಮಗೆ ಗೊತ್ತಾಗಿದೆ. ಈ ಪದ್ಧತಿಯಿಂದ ಮುಂದೆ ಒಂದು ಉದಾಹರಣೆಯನ್ನು ಬಿಡಿಸುವಾ. ೫ಕ್ಷ+೨ಯ= ೧೬, ೨ಕ್ಷ−೩ಯ+೫=೦ ಈ ಜೋಡಿಯನ್ನು ನಮಗೆ ಬಿಡಿಸಬೇಕಾಗಿದೆ ಎಂದು ತಿಳಿಯಿರಿ. ೫ಕ್ಷ+೨ಯ=೧೬ ಇದರ ಆಲೇಖವನ್ನು ತೆಗೆಯುವದಾದರೆ ಕ್ಷ=೦, ೪,೬ ಇದ್ದಾಗ ಯ=೮, −೨, −೭ ಇರುವದು. ಅಡ್ಡ-ಅಕ್ಷವನ್ನು ಕ್ಷ ಅಕ್ಷವೆಂದು ಉಭ್ಭ ಅಕ್ಷವನ್ನು ಯ ಅಕ್ಷವೆಂದು ತಿಳಿದು (೦,೮) (೪−೨) ಇವುಗಳೊಳಗಿಂದಹೋಗುವ ರೇಷೆಯನ್ನು ತೆಗೆದರೆ ಅದು (೬, −೭) ಒಳಗಿಂದಾದರೂ ಹೋಗುವದು. ಆದುದರಿಂದ ಇದು ೫ಕ್ಷ+೨ಯ=೧೬, ಇದರ ಆಲೇಖವಾಯಿತು. ಈಗ ೨ಕ್ಷ−೩ಯ+೫=೦ ಇದರ ಆಲೇಖವನ್ನು ತೆಗೆಯುವದಾದರೆ

ಕ್ಷ = − ೭, −೧, ೫ ಇದ್ದಾಗ ಯ = − ೩, ೧, ೫ ಇರುವದು. (−೭, −೩), (−೧,೧), (೫,೫) ಇವುಗಳೊಳಗಿಂದ ಹೋಗುವ ರೇಷೆಯನ್ನು ತೆಗೆದರೆ ಅದು ೨ಕ್ಷ — ೩ಯ + ೫ = ೦ ಇದರ ಆಲೇಖವಾಯಿತು.

(೧) ೪ಕ್ಷ—೩ಯ = ೩; ೨ಕ್ಷ+೫ಯ = ೨೧.
(೨) ೭ಕ್ಷ—೫ಯ = ೧೨; ೩ಕ್ಷ+೨ಯ = ೧.
(೩) ೪ಯ+೭ರ = ೧೫; ೪ಯ—೭ರ = ೧.
(೪) ೪ತ+೨ಸ = ೫; ೩ತ—ಸ = ೦.
(೫) ೨ಯ—೫ರ = ೧೩; ೩ಯ+ರ = ೧೧.
(೬) ೬ಯ—೩ವ = ೯; ೫ಯ+೭ವ = ೧೭.
(೭) ೨ಪ+೫ಮ+೧೫ = ೦; ೪ಪ—೩ಮ = ೯.
(೮) ಯ = ೪ಕ್ಷ+೩; ಯ = ೩ಕ್ಷ+೫.
(೯) ೨ಪ+$\frac{೧}{೨}$ಮ = ೫; ೪ಪ—$\frac{೧}{೩}$ಮ = ೨.
(೧೦) $\frac{೧}{೨}$ಯ+$\frac{೧}{೩}$ಕ್ಷ = ೫; $\frac{೧}{೩}$ಯ+$\frac{೧}{೨}$ಕ್ಷ = ೫.
(೧೧) ೨ರ—$\frac{೧}{೨}$ವ = ೫; $\frac{೧}{೩}$ರ—ವ+೩ = ೦.
(೧೨) ೮ರ+೩ಸ—೫ = ೦; ೩ರ—೫ಸ—೮ = ೦.

ಕೆಳಗಿನ ಸಮೀಕರಣಗಳನ್ನು ಆಲೇಖಗಳ ಸಹಾಯದಿಂದ ಬಿಡಿಸಿರಿ.

(೧೩) ೪ಕ್ಷ—೩ = ೨ಕ್ಷ+೫. (೧೪) ೩ವ+೭ = ೨—೭ವ.
(೧೫) ೨ರ—೭ = ೪—ರ (೧೬) ೨—೫ಸ = ೮+೩ಸ.

ಪ್ರತಿಯೊಂದು ಅವ್ಯಕ್ತದ ಬೆಲೆಯು ಯಾವದಿದ್ದರೆ ಮುಂದೆ ಕೊಟ್ಟ ರಾಶಿಗಳ (**ಫಲಗಳ**) ಬೆಲೆಗಳು ಸಮಾನವಿರುವವೆಂಬುದನ್ನು ಆಲೇಖ-ಗಳ ಸಹಾಯದಿಂದ ಹೇಳಿರಿ.

(೧೭) ೫ಕ್ಷ—೩ ಮತ್ತು ೧೪—೩$\frac{೧}{೨}$ಕ್ಷ.
(೧೮) ೪ಪ—೯ ಮತ್ತು $\frac{೨೭—ಪ}{೮}$.
(೧೯) $\frac{೬ಸ+೪}{೫}$ ಮತ್ತು $\frac{೮ಸ+೫}{೭}$.
(೨೦) $\frac{೯ನ+೧೭}{೨}$ ಮತ್ತು ೯—$\frac{೧—೧೪ನ}{೩}$.

೭.

೭·೨೨. **ಉ.೧. ಒಂದು ಪುಸ್ತಕದ ೧೦೦೦,೨೦೦೦,೫೦೦೦, ೮೦೦೦, ೧೦೦೦೦, ೧೨೦೦೦ ಪ್ರತಿಗಳನ್ನು ಛಾಪಿಸುವದಕ್ಕಾಗಿ**

ಅನುಕ್ರಮವಾಗಿ ೧೦೦೦ ರೂ., ೧೫೦೦ ರೂ., ೩೦೦೦ ರೂ., ೪೫೦೦ ರೂ., ೫೫೦೦ ರೂ., ೬೫೦೦ ರೂ., ಹೀಗೆ ಖರ್ಚು ಬರುತ್ತದೆ. ಇದರ ಮೇಲಿಂದ ಪ್ರತಿಗಳ ಸಂಖ್ಯೆ ಮತ್ತು ಮುದ್ರಿಸುವ ವೆಚ್ಚ ಇವುಗಳ ಸಂಬಂಧವನ್ನು ತೋರಿಸುವ ಆಲೇಖವನ್ನು ತೆಗೆಯಿರಿ. ಮತ್ತು ಅದರ ಮೇಲಿಂದ ೩೦೦೦ ಪ್ರತಿಗಳನ್ನು ಛಾಪಿಸುವದಕ್ಕೆ ಎಷ್ಟು ವೆಚ್ಚ ಬರುವದು ಮತ್ತು ೨೫೦೦ ರೂ. ವೆಚ್ಚ ಮಾಡಿದರೆ ಎಷ್ಟು ಪ್ರತಿಗಳು ಛಾಪಿಸಲ್ಪಡುತ್ತವೆ, ಎಂಬುದನ್ನು ಹೇಳಿರಿ.

ಪ್ರತಿಗಳ ಸಂಖ್ಯೆಯನ್ನು ಅಡ್ಡ ಅಕ್ಷದ ಮೇಲೆ (೦'೨೫" = ೧೦೦೦ ಪ್ರ.) ಮತ್ತು ಛಾಪಿಸುವ ಖರ್ಚನ್ನು ಉದ್ದ ಅಕ್ಷದ ಮೇಲೆ (೦'೨೫" = ೧೦೦೦ ರೂ.) ತೋರಿಸುವಾ. ಪ್ರತಿಗಳ ಸಂಖ್ಯೆ ಮತ್ತು ಮುದ್ರಿಸುವ ವೆಚ್ಚ ಇವುಗಳ




ಆಲೇಖ ಕ್ರ. ೧೭.

ಸಂಬಂಧವನ್ನು ತೋರಿಸುವ ಬಿಂದುಗಳನ್ನು ಸ್ಥಾಪಿಸಿದರೆ ಅವು ಒಂದೇ ಸರಳ ರೇಷೆಯ ಮೇಲಿದ್ದುದು ಕಂಡುಬರುತ್ತದೆ. ಆಲೇಖದ ಮೇಲಿಂದ ೩೦೦೦ ಪ್ರತಿಗಳನ್ನು ಛಾಪಿಸುವದಕ್ಕಾಗಿ ೨೦೦೦ ರೂ. ಖರ್ಚು ಬರುತ್ತದೆ, ಮತ್ತು ೨೫೦೦ ರೂ. ಗಳಿಗೆ ೪೦೦೦ ಪ್ರತಿಗಳು ಛಾಪಿಸಲ್ಪಡುತ್ತವೆ ಎಂದು ಕಂಡುಬರುತ್ತದೆ.

**ಉ.೭. ಒಂದು ನೆಲವನ್ನು ತಯಾರು ಮಾಡುವ ಕೆಲಸವನ್ನು ಪಾಂಡುರಂಗನೊಬ್ಬನೇ ೧೦ ದಿವಸಗಳಲ್ಲಿ ಮತ್ತು ರಾಮನು ೧೫**

ದಿನಗಳಲ್ಲಿ ಮುಗಿಸುತ್ತಾರೆ. ಇಬ್ಬರೂ ಕೂಡಿ ಆ ಕೆಲಸವನ್ನು ಎಷ್ಟು ದಿವಸಗಳಲ್ಲಿ ಮುಗಿಸುವರು ?

ಅಡ್ಡ ಅಕ್ಷದ ಮೇಲೆ ಕಾಲ ೦.೨" = ೧ ದಿವಸ ಮತ್ತು ಉದ್ದ ಅಕ್ಷದ ಮೇಲೆ ೨" = ೧ ಕೆಲಸವನ್ನು ತೋರಿಸಿದರೆ ಅಪ ಇದು ಪಾಂಡುರಂಗನ ಕೆಲಸದ ಆಲೇಖವಾಗುವದು. ರಾಮನು ವಿರುದ್ಧ ದಿಕ್ಕಿನಲ್ಲಿ ಕೆಲಸವನ್ನು ಪ್ರಾರಂಭಿಸಿದ್ದಾನೆಂದು ಕಲ್ಪಿಸಿದರೆ ಇರ ಇದು ರಾಮನ ಕೆಲಸದ ಆಲೇಖವಾಗುವದು. ಈ ಎರಡೂ ಆಲೇಖಗಳು ಯಾವ ಬಿಂದುವಿನಲ್ಲಿ ಛೇದಿಸುತ್ತವೆಯೋ ಅದರ




ಆಲೇಖ ಕ್ರ. ೧೮.

ಭುಜಾಂತರ ೬ ಇದ್ದುದರಿಂದ ೬ ದಿವಸಗಳಲ್ಲಿ ಇಬ್ಬರೂ ಕೂಡಿ ಕೆಲಸವನ್ನು ಮುಗಿಸುತ್ತಾರೆಂದು ನಿಶ್ಚಿತವಾಗುತ್ತದೆ. ಆಲೇಖ ಪತ್ರದ ಮೇಲೆ ಕಂಡು ಬರುವದೇನೆಂದರೆ ಪಾಂಡುರಂಗನು ಒಂದು ದಿಕ್ಕಿನಿಂದ ೩/೫ ಕೆಲಸವನ್ನು ಮುಗಿಸಿದ್ದು ರಾಮನು ವಿರುದ್ಧ ದಿಕ್ಕಿನಲ್ಲಿ ೨/೫ ಕೆಲಸವನ್ನು ಮುಗಿಸಿದ್ದಾನೆ, ಅಂದರೆ ಇಬ್ಬರೂ ಕೂಡಿ ಪೂರ್ಣ ಕೆಲಸವನ್ನು ಮುಗಿಸಿದ್ದಾರೆ.

**ಉ ೩. ಪ ಮತ್ತು ಬ ಈ ಎರಡು ಊರುಗಳು ಒಂದರಿಂದ ಒಂದು ೨೦ ಮೈಲುಗಳ ಅಂತರದ ಮೇಲೆ ಇರುತ್ತವೆ. ಕೃಷ್ಣನು ಪ ಊರಿ-**

ನಿಂದ ಬೆಳಿಗ್ಗೆ ೬ ಗಂಟೆಗೆ ಹೊರಟು ತಾಸಿಗೆ ಸರಾಸರಿ ೪ ಮೈಲಿನಂತೆ ೨ ತಾಸುಗಳ ವರೆಗೆ ನಡೆದನಂತರ ಅರ್ಧ ತಾಸು ವಿಶ್ರಮಿಸುತ್ತಾನೆ ಮತ್ತು ಉಳಿದ ಅಂತರವನ್ನು ತಾಸಿಗೆ ೩ ಮೈಲುಗಳಂತೆ ನಡೆಯುತ್ತಾನೆ. ಗೋವಿಂದನು ಅದೇ ಊರಿನಿಂದ ೫ ಗಂಟೆಗೆ ಹೊರಟು ತಾಸಿಗೆ ಸರಾಸರಿ ೩ ಮೈಲುಗಳಂತೆ ೧೦ ಗಂಟೆಯ ವರೆಗೆ ನಡೆಯುತ್ತಾನೆ ಮತ್ತು ಮುಂದೆ ಒಂದೂವರೆ ಗಂಟೆ ವಿಶ್ರಾಂತಿಯನ್ನು ತೆಗೆದುಕೊಂಡು ಉಳಿದ ಅಂತರವನ್ನು ತಾಸಿಗೆ ೨½ ಮೈಲುಗಳಂತೆ ನಡೆಯುತ್ತಾನೆ. ಆದರೆ ಆ ಇಬ್ಬರ ಪ್ರವಾಸಗಳ ಆಲೇಖಗಳನ್ನು ತೆಗೆಯಿರಿ, ಮತ್ತು ಅವರಿಬ್ಬರೂ ಯಾವಾಗ ಮತ್ತು ಎಲ್ಲಿ ಭೆಟ್ಟಿಯಾಗುವರು ಎಂಬುವದನ್ನು ಹೇಳಿರಿ.

ಅಡ್ಡ ಅಕ್ಷದ ಮೇಲೆ ಬೆಳಿಗ್ಗೆ ೫ ಗಂಟೆಯ ನಂತರದ ಕಾಲವನ್ನು (೦.೨″ = ೧ ತಾಸು) ಮತ್ತು ಉದ್ದ ಅಕ್ಷದ ಮೇಲೆ ಪ ಊರಿನಿಂದ ಇರುವ ಅಂತರವನ್ನು (೦.೧″=೧ ಮೈ) ತೋರಿಸಿದರೆ ಕಖಗಘ ಇದು ಕೃಷ್ಣನ ಪ್ರವಾಸದ ಆಲೇಖವಾಗುವದು. ಮತ್ತು ಅಚಛಜ ಇದು ಗೋವಿಂದನ ಪ್ರವಾಸದ ಆಲೇಖವಾಗುವದು. ಅವು ಯಾವ ಬಿಂದುವಿನಲ್ಲಿ ಛೇದಿಸುತ್ತವೆಯೋ ಆ ಬಿಂದುವು ೧೦ ಹೊಡೆದು ೫೦ ಮಿನಿಟುಗಳ ಕಾಲವನ್ನು ಮತ್ತು ಆರಂಭಸ್ಥಾನದಿಂದ ೧೫ ಮೈಲುಗಳ




ಆಲೇಖ ಕ್ರ. ೧೯.

ಅಂತರವನ್ನು ತೋರಿಸುತ್ತದೆ. ಅಂದರೆ ಅವರಿಬ್ಬರು ಹತ್ತು ಹೊಡೆದು ೫೦ ಮಿನಿಟುಗಳ ನಂತರ ಪ ಊರಿನಿಂದ ೧೫ ಮೈ. ಅಂತರದ ಮೇಲೆ ಭೆಟ್ಟಿಯಾಗುವರು.

**ಉ.೪.** ಮೊದಲನೆ ೩೬೦೦ ರೂ., ಗಳ ರಕಮಿಗೆ ಪೂರ್ಣ ಸೂಟು-

ಸಿಕ್ಕು ಉಳಿದ ಉತ್ಪನ್ನದ ಮೇಲೆ ರೂಪಾಯಿಗೆ ೧ ಆಣೆಯಂತೆ ಕರವು ಆಕರಿಸಲ್ಪಡುತ್ತಿರುವಾಗ ಎಷ್ಟು ಕರವು ಕೊಡಬೇಕಾಗು-ತ್ತಿತ್ತೋ ಅಷ್ಟೇ ಮೊದಲಿನ ೪೨೦೦ ರೂ. ಗಳಿಗೆ ಪೂರ್ಣ ಸೂಟು-ಸಿಕ್ಕು ಉಳಿದ ಉತ್ಪನ್ನದ ಮೇಲೆ ರೂಪಾಯಿಗೆ ೧। ಆಣೆಯಂತೆ ಕರವು ಆಕಸರಿಸಲ್ಪಟ್ಟಾಗಾದರೂ ಕೊಡಬೇಕಾಗುತ್ತಿದ್ದರೆ, ವಾರ್ಷಿಕ ಉತ್ಪನ್ನ ಎಷ್ಟು? ಮತ್ತು ಎಷ್ಟು ಕರವನ್ನು ಕೊಡಬೇಕಾಗುತ್ತದೆ?

ಅಡ್ಡ ಅಕ್ಷದ ಮೇಲೆ ಉತ್ಪನ್ನವನ್ನು (೧" = ೧೦೦೦ ರೂ.) ಮತ್ತು ಉದ್ದ ಅಕ್ಷದ ಮೇಲೆ ಕರವನ್ನು (೧" = ೧೦೦ ರೂ.) ತೋರಿಸಿದರೆ ಆಕ




ಆಲೇಖ ಕ್ರ. ೨೦.

ಇದು ಕರವನ್ನು ಆಕರಿಸುವ ಹಳೇ ಪದ್ಧತಿಯು, ಮತ್ತು ಪಬ ಇದು ಹೊಸ ಪದ್ಧತಿಯ ಆಲೇಖವಾಗುವದು. ಎರಡೂ ಆಲೇಖಗಳು ಯಾವ ಬಿಂದುವಿನಲ್ಲಿ ಛೇದಿಸುತ್ತವೆಯೋ ಅದು ೬೬೦೦ ರೂ. ಇದ್ದು ೧೮೭ತ್ರಿ ರೂ. ಕರವನ್ನು ಕೊಡಬೇಕಾಗುತ್ತದೆಂದು ನಿಶ್ಚಿತವಾಗುತ್ತದೆ.

ಉ. ೫. ಬೀಜಗಣಿತದ ಒಂದು ಪರೀಕ್ಷೆಯಲ್ಲಿ ಒಂದು ವರ್ಗದಲ್ಲಿ ಎಲ್ಲರಿಗಿಂತಲೂ ಹೆಚ್ಚು ಗುಣಗಳನ್ನು ತೆಗೆದುಕೊಳ್ಳುವ ವಿದ್ಯಾರ್ಥಿಗೆ ೭೫ ಗುಣಗಳು ಸಿಕ್ಕವು. ಮತ್ತು ಎಲ್ಲರಿಗಿಂತ ಕಡಿಮೆ ತೆಗೆದುಕೊಳ್ಳು-

ವವನಿಗೆ ೧೫ ಗುಣಗಳು ದೊರೆತವು. ಎಲ್ಲಕ್ಕೂ ಹೆಚ್ಚು ಗುಣಗಳು ೧೦೦ ಮತ್ತು ಎಲ್ಲಕ್ಕೂ ಕಡಿಮೆ ಗುಣಗಳು ೨೫ ಈ ರೀತಿಯಲ್ಲಿ ಆ ಎಲ್ಲ ಗುಣಗಳನ್ನು ಬದಲಿಸುವದಿದ್ದರೆ ಮೊದಲು ಕೊಟ್ಟ ಗುಣಗಳು ಮತ್ತು ಈಗ ಕೊಡತಕ್ಕ ಗುಣಗಳು, ಇವುಗಳೊಳಗಿನ ಸಂಬಂಧ-ವನ್ನು ತೋರಿಸುವ ಆಲೇಖಗಳನ್ನು ತೆಗೆಯಿರಿ, ಮತ್ತು ಮೊದಲು




ಆಲೇಖ ಕ್ರ. ೨೧.

೧೯ ಗುಣಗಳನ್ನು ಪಡೆದವನಿಗೆ ಈಗ ಎಷ್ಟು ಗುಣಗಳು ದೊರೆಯು-ವವೆಂಬುದನ್ನೂ ಮತ್ತು ಈಗ ೮೦ ಗುಣಗಳನ್ನು ಪಡೆಯುವವನಿಗೆ ಮೊದಲು ಎಷ್ಟು ಗುಣಗಳು ದೊರೆತಿದ್ದವೆಂಬುದನ್ನೂ ಹೇಳಿರಿ.

ಅಡ್ಡ ಅಕ್ಷದ ಮೇಲೆ ಮೊದಲಿನ ಗುಣಗಳನ್ನು (೧=೨೦) ಮತ್ತು ಉದ್ದ ಅಕ್ಷದ ಮೇಲೆ ಈಗಿನ ಹೊಸ ಗುಣಗಳನ್ನು (೧=೨೦) ತೋರಿಸಿದರೆ ಆಗ ರೇಖೆಯು ಬೇಕಾಗಿರುವ ಆಲೇಖವಾಗುವದು. ಅದರ ಮೇಲಿಂದ ಮೊದಲು ೧೯ ಗುಣಗಳನ್ನು ಪಡೆದವನಿಗೆ ಈಗ ೩೦ ಗುಣಗಳು ದೊರೆಯುವವು, ಮತ್ತು ಈಗ ೮೦ ಗುಣಗಳನ್ನು ಪಡೆಯುವವನಿಗೆ ಮೊದಲು ೫೯ ಗುಣಗಳು ಸಿಕ್ಕಿದ್ದ-ವೆಂದು ಕಂಡುಬರುವದು.

ಉ. ೬. ಅಕ್ಕಿಯ ದರವು ಸೇರಿಗೆ ೮ ಆಣೆ ಇದ್ದಾಗ ಒಂದು ಕುಟುಂಬದ ತಿಂಗಳಿನ ಖರ್ಚು ೨೦೦ ರೂ. ಇತ್ತು ಮತ್ತು ೧೨ ಆಣೆ ಇದ್ದಾಗ ೨೫೦ ರೂ. ಇತ್ತು. ದರವು ಒಮ್ಮೆಲೇ ಏರಿ ಅದು ಸೇರಿಗೆ ೧ ರೂ. ಆದರೆ ತಿಂಗಳಿನ ಖರ್ಚು ಎಷ್ಟು ಇರುವದು, ಮತ್ತು ತಿಂಗಳಿನ ಖರ್ಚು ೧೭೫ ಇದ್ದಾಗ ದರವು ಎಷ್ಟಿತ್ತು ?

ಅಡ್ಡ ಅಕ್ಷದ ಮೇಲೆ ಅಕ್ಕಿಯ ದರವನ್ನು (೧=೮ ಪೈ.) ಮತ್ತು ಉದ್ದ ಅಕ್ಷದ ಮೇಲೆ ತಿಂಗಳಿನ ಖರ್ಚನ್ನು (೧=೫೦ ರೂ.) ತೋರಿಸಿದರೆ ಆಖ ರೇಖೆಯು ಅಕ್ಕಿಯ ದರ ಮತ್ತು ತಿಂಗಳಿನ ಖರ್ಚು ಇವುಗಳ ಸಂಬಂಧವನ್ನು ತೋರಿಸುವ ಆಲೇಖ-ವಾಗುವದು. ಅದರ ಮೇಲಿಂದ ಕಂಡುಬರು-




ಆಲೇಖ ಕ್ರ. ೨೨.

ಏನೆಂದರೆ ದರವು ರೂ. ೫೦. ೧೬ ಆಣೆ ಇದ್ದಾಗ ಖರ್ಚು ೫೫ ರೂ. ಇರುವದು, ಮತ್ತು ಖರ್ಚು ೧೧೫ ರೂ. ಇದ್ದಾಗ ದರವು ೪ ಆಣೆ ಇರುವದು.

**ಉ. ೭. ಒಂದು ಕ್ರೀಡಾಭವನದ ತಿಂಗಳಿನ ಖರ್ಚು, ಸಭಾಸದರ ಸಂಖ್ಯೆಯು ೪೦೦ ಇದ್ದಾಗ ೧೮೦೦ ರೂ. ಮತ್ತು ೨೫೦ ಇದ್ದಾಗ ೧೩೫೦ ರೂ. ಇರುತ್ತದೆ. ಇದರ ಮೇಲಿಂದ ಸಭಾಸದರ ಸಂಖ್ಯೆ ಮತ್ತು ತಿಂಗಳಿನ ಖರ್ಚು ಇವುಗಳೊಳಗಿನ ಸಂಬಂಧವನ್ನು ತೋರಿಸುವ ಆಲೇಖವನ್ನು ತೆಗೆಯಿರಿ, ಮತ್ತು ಸಭಾಸದರ ತಿಂಗಳಿನ ಚಂದಾ ೧ ರೂ. ಇದ್ದಾಗ ಭವನಕ್ಕೆ ಏನೂ ಹಾನಿಯಾಗಬಾರದೆಂದು ಸಭಾಸದರ ಸಂಖ್ಯೆಯು ಅತಿ ಕಡಿಮೆ ಅಂದರೆ ಎಷ್ಟಿರಬೇಕೆಂಬುದನ್ನು ಹೇಳಿರಿ.**

ಅಡ್ಡ ಅಕ್ಷದ ಮೇಲೆ ಸಭಾಸದರ ಸಂಖ್ಯೆಯನ್ನು (೧ = ೨೦೦) ಮತ್ತು ಉದ್ದ ಅಕ್ಷದ ಮೇಲೆ ರೂಪಾಯಿಗಳನ್ನು (೧ = ೧೦೦೦ ರೂ.) ತೋರಿಸಿದರೆ **ಕಖ** ಈ ರೇಷೆಯು ತಿಂಗಳಿನ ಖರ್ಚಿನ ಆಲೇಖವಾಗುವದು, ಮತ್ತು ಸಭಾಸದರ ಸಂಖ್ಯೆಯು ೨೦೦ ಇದ್ದಾಗ ಉತ್ಪನ್ನವು ೧೦೦೦, ಮತ್ತು ೪೦೦ ಇದ್ದಾಗ ಉತ್ಪನ್ನವು ೨೦೦೦ ರೂ. ಇದ್ದುದರಿಂದ **ಆಖ** ಈ ರೇಷೆಯು ಉತ್ಪನ್ನದ ಆಲೇಖವಿರುವದು. ಈ ಎರಡೂ ಆಲೇಖಗಳು ಒಂದನ್ನೊಂದು ಯಾವ ಬಿಂದುವಿನಲ್ಲಿ ಛೇದಿಸುವವೋ ಅದು ೩೦೦ ಸಭಾಸದರು ಮತ್ತು ೧೫೦೦ ರೂ. ಇವುಗಳ ನಿರ್ದೇಶಕವಿರುವದು. ಇದರ




ಆಲೇಖ ಕ್ರ. ೨೩.

